ಪರಿಮಳ ಸಾಹಿತ್ಯ ಮಾಲಾ—೧

# ರಥ-ರಥಿಕ

(ಲಗು ಪ್ರಬಂಧಗಳು)





ಬರೆದವರು
ಎನ್. ಪ್ರಹ್ಲಾದರಾವ್, ಎಂ.ಎ.



ಪ್ರಕಾಶಕರು
**ಪರಿಮಳ ಸಾಹಿತ್ಯ ಮಂದಿರ**
ಚಾಮರಾಜಪೇಟೆ : : ಬೆಂಗಳೂರು ನಗರ

ಪ್ರಥಮ ಮುದ್ರಣ
೧೦೦೦ ಪ್ರತಿಗಳು

ಬೆಲೆ
ರೂ ೧-೮-೦





## ಕೈ ಮ ರ

# ಪ್ರಕಾಶಕರ ಮುನ್ನುಡಿ

'ಸದಾ ಸಂತೋಷ ಚಿತ್ತಾನಾಂ ಸಂಪದಸ್ತು ದಿನೇ ದಿನೇ' ಇದು ಆರ್ಯವಾಕ್ಯ. ಲೋಕ ಕಲ್ಯಾಣಕ್ಕಾಗಿ, ಮಾನವ ಕುಲದ ಹಿತಕ್ಕಾಗಿ ನಿರೂಪಿಸಲ್ಪಟ್ಟ ಹಲವು ನೀತಿ ವಾಕ್ಯಗಳಲ್ಲಿ ಇದೂ ಒಂದು. ಆದರೆ ಕಟ್ಟು-ಕಟ್ಟಳೆಗಳಿಗೆ ಸಿಕ್ಕುಬೀಳಲು ಅಷ್ಟಾಗಿ ಇಚ್ಛಿಸದ ಜನತೆ ಆಗತ್ಯ–ಅನಗತ್ಯ ವಾವುದೆಂಬುದನ್ನು ಗಮನಿಸದೆ ಮೂಕರಂತಿರುವುದು ಸ್ವಾಭಾವಿಕ. ಕಾಲ, ಕರ್ಮ ಸಂಯೋಗದಿಂದ ಎಂಥ ಜಡಸ್ವಭಾವವಾದರೂ ದೀರ್ಘ ನಿದ್ರೆಯಿಂದ ಕೊಡಹಿಕೊಂಡು ಏಳಬೇಕಾದುದು ಪ್ರಕೃತಿ ನಿಯಮ. ಅಂಥ ಸನ್ನಿವೇಶ ನಮಗೆ ಇಂದು ಒದಗಿ ಬಂದಿರುವುದು ಆಶ್ಚರ್ಯವಲ್ಲ. ಈ ಸಂದರ್ಭವನ್ನು ಸಾಧಿಸಿ ಆರ್ಯವಾಕ್ಯವನ್ನು ಮೊರೆಹೊಕ್ಕು ಧನ್ಯರಾಗಲು ಯತ್ನಿಸಬೇಕಾದುದು ಮಾನವ ಸಹಜ ಕರ್ತವ್ಯ.

ಇಂದು ಭರತಖಂಡ ಮಾತ್ರವಲ್ಲ ಇಡೀ ಪ್ರಪಂಚದ ಜನಾಂಗ ಎಚ್ಚರಗೊಂಡಿದೆ; ದೀರ್ಘ ನಿದ್ರೆಯಿಂದೆದ್ದಿದೆ; ತನ್ನ ಸಹಜ ಸ್ಥಾನಮಾನಗಳಿಗಾಗಿ ಹೊಡೆದಾಡುತ್ತಿದೆ; ಸ್ಥಾಪಿಸಿಕೊಳ್ಳುತ್ತಿದೆ. ನಮ್ಮಲ್ಲೂ, ನಮ್ಮವರಲ್ಲೂ ಈಗೀಗ ಜ್ಞಾನೋದಯವಾಗಿ ಚೇತನ ತಲೆದೋರುತ್ತಿದೆ; ನವ ಚೇತನ ಉಂಟಾಗುತ್ತಿದೆ. ಪೂರ್ವಿಕರ ತಪಃಪ್ರಭಾವದಿಂದ, ಹಿರಿಯರ ಆಶೀರ್ವಾದ ಬಲದಿಂದ, ಅಮರ ಜೀವಿಗಳ ಆದರ್ಶ ಸಾಹಸದಿಂದ ಇಂದು ನಮ್ಮ ಮಾತೃಭೂಮಿಯು ಪರದಾಸ್ಯ ಶೃಂಖಲೆಯನ್ನು ಕಿತ್ತೊಗೆದು ಸರ್ವತಂತ್ರ ಸ್ವತಂತ್ರ ರಾಷ್ಟ್ರವಾಗಿ ವಿಶ್ವದ ವಿವಿಧ ಸ್ವತಂತ್ರ ರಾಷ್ಟ್ರಗಳ ಪಙ್ಕ್ತಿಯಲ್ಲಿ ಸಮಪೀಠವನ್ನು ಗಳಿಸಿ ತಲೆಯೆತ್ತಿ ನಿಂತಿದೆ.

ಇಂಥ ಆನಂದೋತ್ಸಾಹದ ಸಂಧಿ ಕಾಲದಲ್ಲಿ ಕನ್ನಡ ಜನತೆಗೆ ನಮ್ಮ ಆದರದ ಕಾಣಿಕೆಯಾಗಿ ಲಗು ಪ್ರಬಂಧಗಳ ಈ ಸುರಸ ಕೃತಿಯನ್ನು ಅರ್ಪಿಸಿದ್ದೇವೆ. ಜನಮನಕ್ಕೆ ನೇರವಾಗಿ ನಾಟುವಂತೆ ನಿತ್ಯ ಜೀವನ ಸನ್ನಿವೇಶಗಳನ್ನು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಅಳವಡಿಸಿಕೊಂಡು, ಸಂಬಂಧಿಸಿರಬಹುದಾದ ಬೆಂದೊಡಲು ನೊಂದುಕೊಳ್ಳದಂತೆ—ಜೀವನ ಸಂಗ್ರಾಮದಲ್ಲಿ ಸಿಲುಕಿ ಬಳಲಿ ಬೇಸತ್ತ ಜೀವ ಅನೈಚ್ಛಿಕವಾಗಿ ಆನಂದ ಪರವಶವಾಗುವಂತೆ

ಕಥಾ ಸರಣಿಯನ್ನು ಚಿತ್ರಿಸುವುದು ಸಾಹಸದ ಕೆಲಸ. Writing comics is a serious business ಎಂದು ಆರ್ಲ ಸಾಂಡರ್ಸ್ ಹೇಳಿರುವಂತೆ ಅಗುವಾಗಿ ಬರೆಯುವುದು ನಿಜಕ್ಕೂ ಬಹು ಬಿಗುವಿನ ಕೆಲಸ. ಇಂಥ ಸಾಹಸದ ಕಾರ್ಯಭಾಗವನ್ನು ಕನ್ನಡ ಜನತೆಗೆ ಈಗಾಗಲೇ ಸುಪರಿಚಿತ ರಾಗಿರುವ ಪ್ರಕೃತ ಗ್ರಂಥಕರ್ತರಾದ ಶ್ರೀಮಾನ್ ಎನ್. ಪ್ರಹ್ಲಾದರಾವ್ ಎಂ.ಎ., ಅವರು ಸಮರ್ಪಕ ರೀತಿಯಿಂದ ಸಾಧಿಸಿ ಕೃತಕಾರ್ಯರಾಗಿ, ತರುಣ ಲೇಖಕರಿಗೆ ಮಾರ್ಗದರ್ಶಕರಾಗಿದ್ದಾರೆ. ಇನ್ನೂ ಇಂಥ ಹಲವು ಕೃತಿಗಳು ಇವರ ನಿಶಿತ ಲೇಖನಿಯಿಂದ ಹೊರಬಿದ್ದು ಸಮಾಜದ ಕೊಂಕು ಡೊಂಕುಗಳನ್ನು ರೂಢಿಸಲು ಸಹಾಯಕವಾಗಲಿ ;—ಅಂತಾಗಲಿ !

ಸರಸ ಸಾಹಿತ್ಯದ ದಿವ್ಯ ಪರಿಮಳವನ್ನು ಕನ್ನಡ ನಾಡಿನ ಮನೆ ಮನೆಗೂ ಬೀರಬೇಕೆಂಬುದೇ 'ಪರಿಮಳ ಸಾಹಿತ್ಯ ಮಾಲೆ'ಯ ಪರಮೋದ್ದೇಶ. ಆ ಉದ್ದೇಶ ಸಾಧನೆಯ ಮಹತ್ಕಾರ್ಯವು ಇಂಥ ಲೇಖಕ ವೃಂದದ ಬೆಂಬಲ ದಿಂದ ಯಶಸ್ವಿಯಾಗಲೆಂದು ಹಾರೈಸುತ್ತೇವೆ.

೧—೮—೧೯೪೭
ಬೆಂಗಳೂರು ನಗರ.

ಜಿ. ಎಸ್. ಕೃಷ್ಣರಾವ್,
ಸಂಪಾದಕ.

ಮುದ್ರಿಸಿದವರು :
**ಪರಿಮಳ ಪ್ರಿಂಟಿಂಗ್ ವರ್ಕ್ಸ್**
ಚಾಮರಾಜಪೇಟೆ, ಬೆಂಗಳೂರು ನಗರ.

# ರಥ-ರಥಿಕ

ಮೊನ್ನೆ ನಾನು ಅವನು ಮಾತನಾಡುತ್ತಿರುವಾಗ ಬಿ. ಎನ್. ಎ., ಪಿ. ಇ. ಎನ್., ಜಿ. ಆರ್. ಎಸ್., ಹೀಗೆ ಆ ವಿಷಯ ಈ ವಿಷಯ ಎಲ್ಲ ಮುಗಿದು ಕೊನೆಯಲ್ಲಿ ದುಡ್ಡಿನ ಸಮಾಚಾರ ಬಂತು. ಇದು ಸಹಜವಾಗಿ ಬರಬೇಕಾದದ್ದೇ. ಸಮಾಜ, ರಾಜ್ಯ, ವಿಶ್ವ ಎಂದು ನಾವು ಎಷ್ಟೇ ಮಾತನಾಡಲಿ ನಮ್ಮ ಮಾತಿನ ದಾರಿ ಸುತ್ತಿ ಸುತ್ತಿ ಪುನಃ ಸಂಸಾರಕ್ಕೇ ಬಂದು ನಿಲ್ಲುತ್ತದೆ. ಸಂಸಾರಕ್ಕೂ ಕಾಸಿಗೂ ಬಹಳ ಸಂಬಂಧ ಇರುವಂತೆ ಕಾಣುತ್ತದೆ. ಹಿರಿಯರ ಮಾತಿನಂತೆ ಸಂಸಾರವನ್ನು ಒಂದು ರಥ ಎಂದು ಕರೆಯುವ ಪಕ್ಷದಲ್ಲಿ ಕಾಸು ಆ ರಥದ ಗಾಲಿಗಳಾಗುತ್ತವೆ. ಸೂರ್ಯನ ರಥಕ್ಕೆ ಒಂದು ಗಾಲಿಯಾದರೆ ಸಂಸಾರ ರಥಕ್ಕೆ ಸಾವಿರ ಗಾಲಿಗಳು. ಆದರೆ ಸೂರ್ಯನ ರಥಕ್ಕೆ ಏಳು ಕುದುರೆಗಳಿದ್ದರೆ ಸಂಸಾರ ರಥಕ್ಕೆ ಒಂದೇ ಕುದುರೆ. ಆ ಕುದುರೆ ಗೂನಾಗಿರಬಹುದು. ಕುಂಟಾಗಿರಬಹುದು. ಬಡವಾಗಿರಬಹುದು. ಆದರೂ ಅದು ತನ್ನ ಕೆಲಸವನ್ನು ಮಾಡಿಯೇ ತೀರಬೇಕು. ಅದು ಓಡದಿದ್ದರೆ ಸಂಸಾರ ರಥ ಮುಂದೆ ಸಾಗದು. ಗಾಡಿಗಳಲ್ಲಿ ಅನೇಕ ವಿಧವಿದೆ. ಎತ್ತಿನ ಗಾಡಿ, ಕುದುರೆ ಗಾಡಿ, ಕೈಗಾಡಿ, ಮೋಟಾರು, ರೈಲು ಹೀಗೆ. ಅವುಗಳಲ್ಲಿ ಮತ್ತೆ ಜೀಪು, ಚೀಪು, ಒಂಟೆತ್ತು, ಜೋಡಿ ಎತ್ತು, ಜಟಕಾ, ಶಕಟ ಹೀಗೆ ಒಳಭೇದಗಳಿವೆ. ಇದರಂತೆ ಸಂಸಾರ ರಥದಲ್ಲೂ ಅನೇಕ ವಿಧವಾದ ಮಾದರಿಗಳಿವೆ. ಅಜ್ಜನ ಕಾಲದ ಹಳೆಯ ರಥವನ್ನು ಕೆಲವರ ಮನೆಯಲ್ಲಿ ನಾವು ನೋಡಬಹುದು. ಅದು ಅರ್ಜುನನ ರಥದಂತೆ ಚಿತ್ತಾರದಿಂದ ಕೂಡಿರುತ್ತದೆ. ಸಂಪ್ರದಾಯ ಬಲ ಒಂದರಿಂದಲೇ ಅದು ನಡೆಯಬೇಕು. ಕೆಲವರ ಮನೆಯಲ್ಲಿ ನವ ನವೀನವಾದ ರಥ

ಗಳಿರುವುದೂ ಉಂಟು. ಎರಡೇ ಗಾಲಿ. ಪುಟ್ಟ ರಥ. ಎರಡೇ ಪೀಠ ಗಳು. ಕಂಚಿಯ ಕುಬ್ಜ ಕುದುರೆ ಒಂದು. ಆ ರಥದಲ್ಲಿ ಮೂರನೆಯವ ರಿಗೆ ಎಳ್ಳಷ್ಟೂ ಜಾಗ ಸಿಗಲಾರದು. ಕುದುರೆಗೆ ಕಾಲು ಮುಖ್ಯ. ರಥಕ್ಕೆ ಗಾಲಿ ಮುಖ್ಯ. ಗಾಲಿಗಳು ಹೆಚ್ಚಿದಷ್ಟೂ ಓಟ ಸುಲಭ. ಸಾಹುಕಾರರ ರಥಕ್ಕೆ ಸಾವಿರ ಗಾಲಿಗಳಿರುತ್ತವೆ. ಸಣ್ಣ ಪುಟ್ಟ ಸರ್ಕಾರಿ ನೌಕರರ ಗಾಡಿ ಗಳಿಗೆ—ಅವುಗಳನ್ನು ರಥ ಎಂದು ಹೇಳುವುದು ಧೈರ್ಯದ ಮಾತು-ಗಾಲಿಗಳೇ ಕಡಿಮೆ. ದೇಹ ಬಲದಿಂದ ನೂಕಿ ನಡೆಸಬೇಕೇ ಹೊರತು ಚಮತ್ಕಾರಕ್ಕೆ ಅದು ನಡೆಯಲಾರದು. ಹದಿನೈದನೆಯ ತಾರೀಖಿನ ಹೊತ್ತಿಗೆ ಅವರ ರಥಗಳಿಗೆ ಗಾಲಿಗಳೇ ಇರುವುದಿಲ್ಲ! ಮತ್ತೆ ಹೊಸಗಾಲಿ ಹಾಕಿಸಬೇಕಾದರೆ ಬರಬೇಕು ಒಂದನೆಯ ತಾರೀಖು.

ಮೊನ್ನೆ ಕಛೇರಿಯಲ್ಲಿ ಯಾರೋ ಹೇಳುತ್ತಿದ್ದರು "ಸರ್ಕಾರಿ ನೌಕ ರರ ಕೆಲಸ ಏನೂ ಅಂತ ಕೇಳ್ತೀರಲ್ಲ. ಕಣ್ಣ ಮುಂದೆ ಕ್ಯಾಲೆಂಡರ್ ಇಟ್ಟು ಕೊಂಡು ಕಾಲಗಣನೆ ಮಾಡುವುದೇ ಅವರ ಕೆಲಸ. ಅದೇ ಜಪ. ಅದೇ ತಪ. ಅದೇ ಮೋಕ್ಷ. ಅದರಿಂದಲೇ ಅಂತರಂಗ ಶುದ್ಧಿ. ಅದರಿಂದಲೇ ಬಹಿರಂಗ ಶುದ್ಧಿ. ತಾರೀಖಿನ ಎಣಿಕೆ ನಮಗೆ ರಕ್ತಗತವಾಗಿಬಿಟ್ಟಿದೆ. ಮಗ್ಗಿ ತಪ್ಪಿದರೂ ತಾರೀಖಿನ ಲೆಖ್ಖ ತಪ್ಪಲಾರದು.

ಒಂದನೆಯ ತಾರೀಖು ಬರುವ ದಿನ ನಮ್ಮವರ ಉತ್ಸಾಹವನ್ನು ನೋಡಬೇಕು. ಮಧ್ಯಾಹ್ನ ಯಾವಾಗ ಆಗುತ್ತದೋ ಅಂತ ಎಲ್ಲರೂ ಕಾದಿರುತ್ತಾರೆ. ಅಂದು ಕಾಫಿಯ ಮೇಲೆ ಸಹ ಜ್ಞಾನವಿರುವುದಿಲ್ಲ. ಜ್ಞಾನ ಇರುವುದಿಲ್ಲ ಎಂದಲ್ಲ, ಕೈಲಿ ಕಾಸಿರುವುದಿಲ್ಲ. ಸಂಬಳ ಬರಲಿ ಸಾಯಂಕಾಲ ಡಬ್ಬಲ್ ಟಿಫನ್ ಮಾಡಿದರಾಯಿತು ಎನಿಸುತ್ತದೆ ಅದು. ಸಂಬಳ ಬಟವಾಡೆ ಮಾಡುವಾಗ ಒಂದಾಣೆ ಸ್ಟ್ಯಾಂಪಿಗೆ ಕೊಡಲು ಸಹ ಇರುವುದಿಲ್ಲ. ಮನೆಯಲ್ಲಿ ಹೆಂಡತಿ ಈ ನಾಲ್ಕೈದು ದಿನದಿಂದ ತರಕಾರಿ ಇಲ್ಲ ಎಂದು ಗೋಗರೆದಾಗ ಇವತ್ತು ತಾರೀಖು ಮೂವತ್ತು ಕಣೆ, ನಾಳೆ ಒಂದು. ಬರುವಾಗ ಬೇಕಾದಷ್ಟು ತರುತ್ತೇನೆ ಎಂದು ಹೇಳಿದ ಮಾತು ನೆನಪಿಗೆ ಬರುತ್ತದೆ. ತಿಂಗಳಿಗೆ ಮೂವತ್ತು ದಿವಸ ಎಂದು ಹೇಳುತ್ತಾರೆ. ಆದರೆ ಕೆಲವು ತಿಂಗಳಲ್ಲಿ ಮೂವತ್ತೊಂದು ದಿನ ಬರುತ್ತವೆ. ಹೀಗೆ ಸಂಬಳ

ಬರುವುದು ಒಂದು ದಿನ ತಡವಾದರೆ ಬಡವರ ಗತಿ ಏನು? ಎಲ್ಲ ತಿಂಗಳು ಗಳೂ ಇನ್ನು ಮುಂದೆ ಫೆಬ್ರವರಿಯಂತೆ ಇಪ್ಪತ್ತೆಂಟು, ಇಪ್ಪತ್ತೊಂಬತ್ತಕ್ಕೆ ಮುಗಿಯಬೇಕು. ಒಂದನೇ ತಾರೀಖು ಯಾವ ರಜವೂ ಬರಬಾರದು. ಆಗ ಮಾತ್ರ ಸಂಸಾರ ರಥ ಸುಗಮವಾಗಿ ನಡೆದೀತು.

ಅಂದು ಸಂಜೆ ಐದು ಗಂಟೆಯಾಗುತ್ತಿರುವಂತೆಯೆ ರಥಿಕನ ಮನಸ್ಸು ಉಬ್ಬುತ್ತದೆ. ತುಟಿ ಉತ್ಸಾಹದಿಂದ ನಡುಗುತ್ತದೆ. ಆವತ್ತು ಅವನ ಸಂಸಾರ ಜಟಕಾಕ್ಕೆ ಹೊಸ ಗಾಲಿಗಳು ಬಂದ ದಿನ. ನಾಗಾಲೋಟ ದಿಂದ ಓಡುವ ಆತುರ ಉತ್ಸಾಹ ಅವನಲ್ಲಿ ಮೂಡುತ್ತಿವೆ. ಹ್ಯಾ, ಹೈ ಹೈ ಏ ಬಾಜೂ ಎಂದು ಅವನು ಕೂಗುತ್ತ ಬಾರು ಕೋಲಿನಿಂದ ಗಾಲಿಗೆ ಅಡ್ಡ ತಡೆದು ಗಟ ಗಟ ಗಟ ಶಬ್ದ ಮಾಡುತ್ತ ಮನೆಯ ಕಡೆಗೆ ಓಡುತ್ತಾನೆ. ನಾಲ್ಕು ದಿನದಿಂದ ಕಾಫಿಗಾಗಿ ಅಂಡಲೆವ ಜೀವನ ರಥಿಕನ ಮನಸ್ಸಿಗೆ ಅಂದು ಬರದು ಅಂದು ಅವನ ಹೃದಯ ಪರಿಪೂರ್ಣ. ಹೆಂಡತಿ ತನ್ನನ್ನು ನಂಬಿದ್ದಾಳೆ. ತಾನು ತಾರೀಖನ್ನು ನಂಬಿದ್ದಾನೆ. ನಂಬಿದ ತಾರೀಖು ಬಂದಿದೆ ಅವನು ಅಂದು ತಲೆ ಎತ್ತಿ ಎದೆ ನಿಮಿರಿಸಿಕೊಂಡು ನಡೆಯಬಲ್ಲ. ಮನೆಯಲ್ಲಿ ಅವನಿಗೆ ಕಾದಿದೆ ವೈಭವದ ಸುಖಾಗಮನ! ಹೆಂಡತಿ ಮಕ್ಕಳಿ ಗಂತೂ ಹೇಳತೀರದ ಉತ್ಸಾಹ! ನಗು ನಗುತ್ತಾ ಹೆಂಡತಿ ಕಾಫಿ ತಂದು ಕೊಡುತ್ತಾಳೆ. ಮಕ್ಕಳು ಸುತ್ತ ಮುತ್ತ ತುಂಬಿಕೊಂಡು "ಅಪ್ಪ" ಎಂದು ಅಕ್ಕರೆಯಿಂದ ಕೂಗುತ್ತವೆ. "ಲೋ ಮಗು, ಅಣ್ಣ ಅವರಿಗೆ ತಿಂಡಿ ಸಾಕೇನು ಅಂತ ಕೇಳು'' ಎಂದು ಉತ್ಸಾಹಿಸುತ್ತಾಳೆ ಮನೆಯಾಕೆ. ಆಹ! ನಿಜವಾದ ಸುಖ. ಸಂಸಾರದಲ್ಲಿ ಸುಖವಿಲ್ಲ. ನೀರ್ಗುಳ್ಳೆಯಂತೆ ಅದು ನಶ್ವರ ಎನ್ನುತ್ತೀರಲ್ಲ! ಇದೆ. ಸಂಸಾರದಲ್ಲೂ ಸುಖ ಇದೆ. ಸಂಸಾರವೆಲ್ಲ ಸ್ವರ್ಗವಾಗಿ ಕಾಣುವುದಲ್ಲ! ಹೌದು ಕಾಣುತ್ತದೆ. ಆದರೆ ಆ ಸ್ವರ್ಗ ಎಷ್ಟು ದಿನದ್ದು? ಇವತ್ತು ಎಷ್ಟು ತಾರೀಖು?... ಆಗಲಿ....ನಾಳೆ? ನಾಳೆ ಎರಡು ತಾನೆ. ನಾಳೆ ಬೆಳಗ್ಗೆ ಕಾಗೆ ಕಾ ಎನ್ನಲಿ. ಆಗ ರಥಿಕ ಮಹಾ ಶಯರಿಗೆ ಗೊತ್ತಾಗುತ್ತದೆ ಈ ಸಂಸಾರ ಮಳೆ ಬಿಲ್ಲಿನಂತೆ, ಮಂಜಿನಂತೆ ಕ್ಷಣಿಕ ಎಂದು.

ಎರಡನೆಯ ತಾರೀಖು ರಥಿಕನ ಕೈ ಬರಿದು. ಜೋಬು ಖಾಲಿ, ತಲೆ ಖಾಲಿ. ಎಲ್ಲ ಖಾಲಿ. ನಿನ್ನೆ ಒಂದು ದಿನ ತಾರೀಖಿನ ಎಣಿಕೆ ತಪ್ಪಿತ್ತು. ಇಂದಿನಿಂದ ಮತ್ತೆ ಎಣಿಕೆ ಪ್ರಾರಂಭವಾಗಬೇಕು. ಒಂದನೆಯ ತಾರೀಖು ಬರುವುದಕ್ಕೆ ಎಷ್ಟು ದಿನ ಇದೆ? ಎಷ್ಟು ಹಗಲು, ಎಷ್ಟು ರಾತ್ರಿಗಳನ್ನು ಕಳೆಯಬೇಕು ಎಂದು ಅವನ ಗುಣಾಕಾರ. ಅವನು ಊಟ ಮಾಡುತ್ತಿರಲಿ, ಆಫೀಸಿನಲ್ಲಿ ಕೆಲಸ ಮಾಡುತ್ತಿರಲಿ, ಹರಟೆ ಹೊಡೆಯುತ್ತಿರಲಿ, ಅವನ ಅಂತರಾತ್ಮ ಮಾತ್ರ ಎರಡು ಮೂರು, ಮೂರು ನಾಲ್ಕು ಎಂದು ತಾರೀಖಿನ ಪಾರಾಯಣ ಮಾಡುತ್ತಿರುತ್ತದೆ. ದುಡಿಯುವುದಕ್ಕೆ ಮೂವತ್ತು ದಿನ, ಖರ್ಚು ಮಾಡುವುದಕ್ಕೆ ಒಂದೇ ದಿನ. ಅದೂ ಹಿಂದಿನ ತಿಂಗಳು ಮಾಡಿದ ಖರ್ಚನ್ನು ಇಂದು ಸಂಬಳದಿಂದ ತೀರಿಸಿದ್ದಾಯಿತು, ಮತ್ತೆ ಇನ್ನು ಮೂವತ್ತು ದಿನ ಸಾಲ.

"ದುಡ್ಡು ಅನ್ನೋಣ ಜ್ಞಾಪಕವಾಯ್ತು. ಅಯ್ಯಾ ತಾರೀಖು ನಾಲ್ಕು. ಆಗಲೇ ಕೈಲಿ ಕಾಸಿಲ್ಲವಾಗಿದೆ. ನೀನೇನಾದರೂ ಗಂಡಸಾಗಿದ್ದರೆ ಒಂದು ಐದು ರೂಪಾಯಿ ಕೊಟ್ಟಿರಯ್ಯ" ಎಂದು ನನ್ನ ಸ್ನೇಹಿತ ಕೇಳಿದ.

ಸಂಬಳದ ಕಾಸು ಕೈಯಲ್ಲಿ ಇರುವಾಗ ಗುಮಾಸ್ತ ಗಂಡಸಾಗುತ್ತಾನೆ. ಆದರೆ ತಿಂಗಳಿಗೆ ಒಂದು ನಾರಿ ಬರುವ ಸಂಬಳ ಎಷ್ಟು ದಿನ ತಾನೆ ಇದ್ದೀತು!

ಸಂಬಳವ ಕೊಂಡಾಗ ಕಂಬಳಿಯು ತೊಟ್ಟಂತೆ
ಸಂಬಳವು ತೀರಿ ಅಳುವಾಗ ಕಣ್ಣೀರ
ಮಿಂದು ಬಂದಂತೆ ಸರ್ವಜ್ಞ

ಎನ್ನುವಂತೆ ಬರುವ ಕಾಸನ್ನೇ ನಚ್ಚಿ ಕುಳಿತ ಕಾರಕೂನನ ಗತಿ ಹೇನಾಯವಾಗುತ್ತದೆ. ಎಲ್ಲಿರೆ ಮನೆಯ ಕಾಸೂ ಗುಂಡೇ. ಬರುವುದರಲ್ಲೇ ಗಾಲಿಯಂತೆ ಉರುಳಿ ಮಾಯವಾಗುತ್ತದೆ. ಸರ್ಕಾರದವರು ಸಂಬಳಾನ ತಿಂಗಳಿಗೆ ಒಂದು ಸಾರಿ ಕೊಡುವುದರ ಬದಲು ವಾರಕ್ಕೆ ಒಂದು ಸಾರಿಯಾದರೂ ಕೊಟ್ಟರೆ ಉಪಕಾರವಾದೀತು. ಪ್ರತಿ ಸೋಮವಾರವೂ ಹಣ ಕೈಲಿ ಇದ್ದಂತಿರುತ್ತದೆ ವಾರ ವಾರಕ್ಕೆ ಖರ್ಚನ್ನು ಸರಿಮಾಡಿಕೊಳ್ಳ

ಬಹುದು. ಸುಮ್ಮನೆ ಒಂದು ದಿನ ಖರ್ಚು ಮಾಡಿ ಮೂವತ್ತು ದಿನ ಇಲ್ಲ ಇಲ್ಲ ಎನ್ನುವುದಕ್ಕಿಂತ ಇದೆಷ್ಟೊ ಮೇಲು. ತಿಂಗಳಿಗೆ ನಾಲ್ಕಾರು ದಿನ ವಾದರೂ ಗಂಡಸಾಗಿರಬಹುದು.

"ಅಲ್ಲ ಕಣೋ" ನನ್ನ ಸ್ನೇಹಿತ ಮಧ್ಯದಲ್ಲಿ ಬಾಯಿಹಾಕಿ ಹೇಳಿದ, "ಸೋಮವಾರ ಬಂದ ಹಣಾನ ಮುಂದಿನ ಸೋಮವಾರದವರೆಗೆ ಉಳಿಸುವ ಮಿತವ್ಯಯಿ ಯಾರಪ್ಪ. ಅದೆಲ್ಲ ಸುಳ್ಳು ನೋಡು. ಮಂಗಳವಾರದ ಬೆಳಗು ಆಗುವುದರಲ್ಲಿಯೇ ಕೈ ಬರಿದಾಗಿರುತ್ತೆ".

ಅದೂ ನಿಜವೇ, ವಾರದಲ್ಲಿ ಐದು ದಿನವಾದರೂ ಓನಾಮ ಜಪ ತಪ್ಪಿದ್ದಲ್ಲ. ಸರ್ಕಾರದವರು ತಿಂಗಳಿಗೆ ಒಂದು ಸಾರಿ ಮೂವತ್ತು ರೂಪಾಯಿ ಕೊಡುವುದರ ಬದಲು, ಮೂವತ್ತನ್ನ ಮೂವತ್ತರಿಂದ ಭಾಗಿಸಿ,-ಮೂವತ್ತು ಒಂದ್ಲ ಮೂವತ್ತು, ಶೇಷ ಸೊನ್ನೆ, ಉತ್ತರ ಒಂದು- ಎಂದು ಪ್ರತಿ ದಿನ ಒಂದೊಂದು ರೂಪಾಯಿ ಕೊಡಬಹುದು. ದಿನಗೂಲಿ ಬಟವಾಡೆಯ ಈ ಕ್ರಮ ಅತಿ ಸಾಧುವಾದುದು.

ಉಹು ಎಂದು ನನ್ನ ಗೆಳೆಯ ತಲೆಯಲ್ಲಾಡಿಸಿದ. "ಅಲ್ಲ ಕಣೋ ದಿನಾ ಸಂಜೆ ಒಂದೊಂದು ರೂಪಾಯಿ ಬಂದರೆ ಅದನ್ನ ಏನು ಮಾಡ್ತಿ ಹೇಳು. ಕಾಫಿ ಕುಡಿಯೋಕೆ ಅಷ್ಟು ಬೇಡ. ಸಾಮಾನು ಕೊಳ್ಳೋಕೆ ಅಷ್ಟು ಸಾಲದು. ಒಂದಾಣೆಗೆ, ಒಂದು ರೂಪಾಯಿಗೆ ಬೆಲೆ ಇಲ್ಲದ ಹಾಗಾಗಿದೆ ಈ ದುರ್ಭಿಕ್ಷ ಕಾಲದಲ್ಲಿ. ಕಾಸು ಕೊಟ್ರೂ ಕಾಫಿ ಸಿಕ್ಕೊಲ್ಲ. ಸಿಕ್ಕರೂ ಸಕ್ಕರೆ ಇಲ್ಲ ಅಂತಾರೆ. ಇದ್ದರೂ ಸರದಿ ಬರೋವರೆಗೆ ಕಾಯಿ ಅಂತಾರೆ. ಅಕ್ಕಿ ಬೇಳೆ ವಿಚಾರ ಅಂತೂ ದೇವರಿಗೇ ಪ್ರೀತಿ. ಇಂಥಾದ್ದ ರಲ್ಲಿ ದಿನಾ ಒಂದು ರೂಪಾಯಿ ತೆಗೆದುಕೊಂಡು ತಲೆ ಮೇಲೆ ಹಾಕಿಕೊಳ್ಳ ಬೇಕು ಅಷ್ಟೆ" ಎಂದ.

ಯಾವ ಯೋಜನೆಯೂ ಸರಿಹೋಗದಿದ್ದ ಮೇಲೆ ರಥಿಕನ ಪಾಡೇನು? ರಥಿಕನ ಪಾಡಿರಲಿ ನನ್ನ ಪಾಡೇ ಸಾಕಾಗಿದೆ. ಮೊದಲು ಸೂಟು ಹಾಕ್ತಾ ಇದ್ದವನು ಈಗ ಟೈ ಬಿಟ್ಟು, ಅನಂತರ ಬೂಟ್ಸ್ ಇಲ್ಲದೆ ಚಪ್ಪಲಿಗೆ ಇಳಿದು ಕೊನೆಗೆ ಸ್ಟ್ಯಾಂಡರ್ಡ್ ಪಂಚೆಗೆ ಉರುಳಿದ್ದೇನೆ. ಅಲ್ಲಿಂದ ಬಿಲೊ

ಸ್ಟಾಂಡರ್ಡ್ ಟವಲಿಗೆ ಜಾರುವ ಗತಿ ಬಂದರೂ ಬರಬಹುದು. ಇಂಥವ್ರ ರಲ್ಲಿ ಯಾರಿಗೆ ಏನೂ ಅಂತ ಕೊಡುವುದು ಸಾಧ್ಯ!

ಹೀಗೆಂದು ಹೇಳುತ್ತಲೆ ಪರ್ಸು ಹೊರಗೆ ತೆಗೆದೆ. ಒಳ ಜೋಬಿನಿಂದ ನಾನು ಅದನ್ನು ತೆಗೆಯುತ್ತಿರುವಾಗ ನನ್ನ ಗೆಳೆಯನ ಕಣ್ಣುಗಳು ಅರಳಿದವು. ತುಟಿ ಅಲುಗಿತು. ಮೂಗು ಅಲುಗಾಡಿತು. ಪರ್ಸು ಹೊಸಾ ಹೊಸದು. ಹೊಳೆಯುವ ಮೆರುಗಿನ ಬಣ್ಣದಿಂದ ಕೂಡಿ ಈಗಿನ ಕಾಲದ ರ್‍ಹೋಕುಮಾರರಂತಿತ್ತು ಆ ಚರ್ಮದ ಚೀಲ. ಸಾವಧಾನವಾಗಿ ನಾನು ಪರ್ಸಿನ ಗುಂಡಿಗಳನ್ನು ಲಟಕ್ ಲಟಕ್ ಎಂತ ತೆಗೆದೆ. ನನ್ನ ಗೆಳೆಯ ಅತಿ ಹತ್ತಿರಕ್ಕೆ ಬಂದು ಹೆಗಲ ಮೇಲೆ ಕೈ ಇಟ್ಟ. ಕನ್ನಡಕ ಸರಿ ಮಾಡಿಕೊಂಡು ಸೀಗುಟ್ಟಿದ. ಬೊಚ ಬೊಚ ಅಂದ ವಾಸನೆ ನೋಡುವರಂತೆ ಉಸಿರೆಳೆದ. ಆಗ ನಾನು "ಮೈಸೂರಿನಿಂದ ಇಲ್ಲಿಗೆ ಬರುವಾಗ ಕೈ ಬರಿದಾಗಿತ್ತು ಕಣಯ್ಯ" ಎಂದೆ.

ಅದಕ್ಕವನು "ಈಗ ನನಗೆ ಹೆಚ್ಚು ಬೇಡ ನೋಡು. ನಾಲ್ಕೇ ನಾಲ್ಕು ಕೊಟ್ಟರೂ ಸಾಕು" ಎಂದು ಮೊಬಲಗನ್ನು ಕಡಿಮೆಯಾಗಿಯೇ ಕೇಳಿದ.

"ಕೈ ನಿಜವಾಗಿಯೂ ಬರಿದಾಗಿತ್ತು ನೋಡು ಈ ಪರ್ಸಿನ ನಾಲ್ಕು ಖಾನೆಗಳೂ ಖಾಲಿಯಾಗಿ ಬರೀ ಬಾಯಿ ಬಿಡುತ್ತಿದ್ದವು. ವಿಷ ತೆಗೆದು ಕೊಳ್ಳುವುದಕ್ಕೂ ಮೂರು ಕಾಸು ಇರಲಿಲ್ಲ, ಈಗ ಬೆಂಗಳೂರಿಗೆ ಬಂದ ಮೇಲೆ ಪರವಾಗಿಲ್ಲ ನೋಡು ಸ್ಥಿತಿ ಉತ್ತಮವಾಗಿದೆ. ಇವತ್ತು ಮೂರು ಕಾಸಾದರೂ!" ಎಂದು ಹೇಳುತ್ತ ಪರ್ಸನ್ನು ತಲೆ ಕೆಳಗೆ ಕಾಲು ಮೇಲೆ ಮಾಡಿ ಅಲುಗಾಡಿಸಿದೆ. ಕಂಸ ಭಯಕ್ಕೆ ಹೆದರಿದ ದೇವಕೀತನಯನಂತೆ ಅದು ವರ್ ವರ್ ಎಂದು ಒರಲಿತು. ದೇವಕಿಯಂತೆ ನನ್ನ ಸ್ನೇಹಿತ ನೋಡುತ್ತಿದ್ದಂತಯೆ ಪರ್ಸಿನ ಪ್ರಾಣವಾಗಿದ್ದ ಮೂರು ಕಾಸು ಟಣ್ ಅಂತ ಕಲ್ಲು ನೆಲದಲ್ಲಿ ಬಿದ್ದು ಉರುಳುತ್ತ ಎರಡು ಮಾರು ಹೋಗಿ ಬಿತ್ತು. ತಲೆ ಕಡಿದ ಕೋಳಿಯಂತೆ ವಿಲ ವಿಲ ಒದ್ದಾಡಿ ಕೊನೆಗೆ ನಿರ್ಜೀವವಾಗಿ ಬಿದ್ದ ಆ ಕಾಸನ್ನು ಕಂಡು ನನ್ನ ಗೆಳೆಯನ ಕಣ್ಣು ಹನಿಗಟ್ಟಿತು.

ಯಾವ ಹುತ್ತದಲ್ಲಿ ಎಷ್ಟು ಹಾವಿದೆಯೋ! ನನ್ನ ಪರ್ಸಿನಲ್ಲಿ ಎಷ್ಟು ಹಣವಿದೆಯೋ ಎಂದು ಅನುಮಾನಿಸುತ್ತಿದ್ದ ಅವನು ಗುಡ್ಡ ಅಗೆದು ಇಲಿ ಹಿಡಿದ ಬೆಪ್ಪನಂತಾದ. ಬೇಸಗೆಯ ಹಿಮಾಲಯದಂತೆ ಕರಗಿ ಹೋದ. ಶರತ್‌ಕಾಲದ ಮೋಡದಂತೆ ಬೆಳ್ಳಗಾದ. ಮಿಲಿಟರಿ ಲಾರಿ ಮೈ ಮೇಲೆ ಹರಿದವನಂತೆ ಕುಸಿದು ಬಿದ್ದ.

ಇಷ್ಟಾದರೂ ರಜಪೂತ ವೀರನಂತೆ ತುಸು ನಕ್ಕ. ಒಂದೇ ನಗು. ಒಂದೇ ಸಾರಿ. "ಥ್ಯಾಂಕ್ಸ್" ಎಂದು ತಲೆ ತಗ್ಗಿಸಿದ.

ಅಂತೂ ಒಂಟಿ ಗಾಲಿಯ ಕುಂಟ ರಥದಲ್ಲಿ ಇಬ್ಬರೂ ಕಾಫಿ ಕೂಡ ಇಲ್ಲದೆ ಸಪ್ಪೆ ಮೋರೆ ಹಾಕಿಕೊಂಡು ಹಿಂತಿರುಗಿದೆವು.



# ಗಂಟುಗ

ಕಾದು ನಿಂತು ನಿಂತು ಕಾದು ಎರಡು ರೂಪಾಯಿ ಕೊಟ್ಟು ತಂದ ಸೌದೆಯ ತುಂಡನ್ನು 'ಅಗೊ ಅಲ್ಲಿದೆ ನೋಡು' ಎಂದು ಬೆರಳು ಮಾಡಿ ತೋರಿಸಿದ. ಅಂಗಳದಲ್ಲಿ ಪಟ್ಟು ಹಿಡಿದ ಜಟ್ಟಿಯಂತೆ ಬೊಕ್ಕ ಬೋರ ಲಾಗಿ ಬಿದ್ದಿದ್ದ ಆ ಮೊಂಡ ತುಂಡು ಒಣಗಿದೆಯೋ ಇಲ್ಲ ಹಸೀ ಮುದ್ದೆ ಯೋ ಎಂದು ಪರೀಕ್ಷೆ ಮಾಡುವುದಕ್ಕಾಗಿ ಜೋರಾಗಿ ಒಂದು ಸಲ ಅದನ್ನು ಒದ್ದೆ. ಅತ್ತ ಇತ್ತ ಅಲುಗಾಡಿದರೂ ಅದು ಮತ್ತೆ 'ಉಹು' ಎಂದು ಮೊದಲಿದ್ದ ಹಾಗೇ ಬಿತ್ತು. ಕುಳಿತುಕೊಂಡು ಎರಡೂ ಕೈಗಳಿಂದ ಅದನ್ನು ನೂಕಿ ಮುಖ ನೋಡಿದಾಗ ಅದು ನನ್ನ ಕಡೆ ದೃಷ್ಟಿ ಹಾಕಿ 'ಹಿ ಹಿ ಹಿ' ಅಂದಿತು. ಅಬ್ಬಾ ಅದರ ಮುಖನೋ! ಶತಗಂಟು! ಅಡ್ಡಮೋರೆ. ಗಂಟು ಮೂಗು. ಗುಜ್ಜು ಗೊರಳು, ದೊಡ್ಡ ಕೈಗಳು, ಗಿಡ್ಡ ದೇಹ. ಇನ್ನೇನು-'ನೃಪತಿ ಕೇಳೆಂದಾ' ಎನ್ನುವುದೇ ಬಾಕಿ. ಗಂಟು ಕುಂಟಿಗೆ ಎಂಟು ಮುಖ ಎನ್ನುವ ಹಾಗೆ ಮುಖವೆಲ್ಲಾ ಉಬ್ಬು ತಗ್ಗು, ಏರು ಇಳಿತ. ಆ ಕುಂಟೆಯನ್ನು ನೋಡಿದರೆ ವಾಲ್ಟ್ ಡಿಸ್ನೆಯ ಕಾರ್ಟೂನ್ ನೋಡಿದ ನೆನಪಾಯಿತು ನನಗೆ. ಸುಟ್ಟು ಹಾಕೋ ಸೌದೆಯ ಸೊಗಸು ನೋಡೋಕೆ ಆಗುತ್ತದೆಯೆ? ನನ್ನ ಪಾಲಿಗೆ ಬಂದದ್ದು. ಅದಕ್ಯಾಕೆಸ್ಕರ "ರಾಜು ಹಿಡಿ ಇದನ್ನೆಯ್ದು ನೀರೊಲೇಲಿ ಚಾಚಿಬಿಡೋಣ' ಎಂದೆ. ರಾಜು ಕೈ ಹಿಡಿದ. ನಾನು ಕಾಲು ಹಿಡಿದೆ. ಹೊತ್ತು ತಂದುದಾಯಿತು. ಒಲೆಯಲ್ಲಿ ಇಡಹೋದರೆ ಆ ತುಂಟ ಕುಂಟ ಕುಂಟೆ ತನ್ನ ಎರಡು ಕೈಗ ಳನ್ನೂ ಒಲೆಯ ಬಾಯಿಗೆ ಅಡ್ಡ ಹಿಡಿದು 'ಉಹು ಬೇಡ ನನ್ನಾಣೆ. ಅಯ್ಯೋ' ಎಂತ ರಗಳೆ ಮಾಡಿತು.

ರಾಜುಗೆ ಇಷ್ಟು ಹೊತ್ತಿಗೆ ಮೈ ಕೈ ಎಲ್ಲ ನೋವಾಗಿತ್ತು. ಆದರೂ ಪಕ್ಕದ ಮನೆಗೆ ಹೋಗಿ ಕುಲಕ್ಕೆ ಮೃತ್ಯು -'ಕೊಡಲಿ'—ಯನ್ನು ತಂದ ಆ ಕೊಡಲಿಯೋ ಗರಗಸದ ಹಾಗಿತ್ತು. ಕೈಲಿ ಹಿಡಿದು ಮೇಲಕ್ಕೆತ್ತಿದರೆ ಅದು ಮೊಸಳೆಯಂತೆ ಹಲ್ಲು ಬಿಟ್ಟು 'ಹ್ರಾ' ಎಂದು ಅರಚಿತು. ನಾನೇ ಕಾಷ್ಠಯಜ್ಞಕ್ಕೆ ಹಿರಿಯಾಳಾಗಿ ನಿಂತು ಕೊಡಲಿಯನ್ನು ಆದಷ್ಟು ಮೇಲ ಕ್ಕೆತ್ತಿ, ನನ್ನ ಇದ್ದ ಇಲ್ಲದ ಬಲವನ್ನೆಲ್ಲಾ ಉಪಯೋಗಿಸಿ ಕುಂಟೆಯ ಬಾಯಿಯ ಮೇಲೆ ಥೂಪ್ ಎಂದು ಒಂದು ಏಟು ಕೊಟ್ಟೆ. ಒಂದೆ ಏಟು! ಆ ಕುಂಟೆ 'ಆ' ಎಂತ ತುಟಿ ಎರಡು ಮಾಡಿ, ಹುಚ್ಚು ನಾಯಿ ಮೇಲೆ ಬಿದ್ದು ಅಂಗೀನೋ ಪಂಚೇನೋ 'ಗಬಕ್' ಎಂದು ಹಿಡಿಯುವ ಹಾಗೆ ಕೊಡಲಿಯನ್ನು ಕಚ್ಚಿಬಿಟ್ಟಿತು. ಎಳೆದರೂ ಇಲ್ಲ ತುಳಿದರೂ ಇಲ್ಲ. ಅಲುಗಾಡಿಸಿದರೂ ಇಲ್ಲ. ಕೊಡಲಿಯನ್ನು ಕುಂಟೆಯಿಂದ ಬಿಡಿಸಿದರೆ ತಾನೇ ಸೌದೆ ಕಡಿಯುವುದು. ಅಷ್ಟರಲ್ಲಿ ರಾಜು ನಾಲ್ಕು ದೊಡ್ಡ ದೊಡ್ಡ ಮೊಳೆಗಳನ್ನು ತಂದು ಬಲವಾಗಿ ಅವುಗಳನ್ನು ಕುಂಟೆಗೆ ಬಡಿದ. ನಿರಾ ಯಾಸವಾಗಿ ಆ ಕುಂಟೆ ಮೊಳೆಗಳನ್ನು ನುಂಗಿ ನೀರು ಕುಡಿದು ಬಿಟ್ಟಿತು. ಶನಿ ಸೌದೆ. ಭಾರತದ ರಾಜಕೀಯದಂತೆ ತೊಡಕು ತೊಡಕು, ಉಪಾ ಯಗಳು ನಾಲ್ಕಕ್ಕೂ ಬಗ್ಗಲಿಲ್ಲ. ಸೀಳ ಹೋದರೆ ಮೈಯೆಲ್ಲಾ ನಾರು ನಾರು. ಚಕ್ಕೆ ಕೂಡ ಏಳೊಲ್ಲ. ಸದ್ಯ ಒಂದು ಎರಡಾದರೆ ಹೇಗಾದರೂ ನೀರೊಲೆಗೆ ಆಹಾರವಾಗುತ್ತದೆ. ಆದರೆ ಅಷ್ಟು ಆಗಬೇಕಲ್ಲ!

'ಸುಮ್ನೆ ಇರ‍್ರಪ್ಪ. ನಾನೊಂದು ಉಪಾಯ ಮಾಡ್ತೀನಿ' ಅಂದ್ರು ನಮ್ಮ ತಾಯಿ. ಅಂದವರೆ ಏನೇನೋ ತಂದ್ರು. ಒಳ್ಳೆಣ್ಣೆ, ಎಳ್ಳೆಣ್ಣೆ, ನೆಯ್ಯ್, ಸೀಮೆ ಎಣ್ಣೆ, ಕುರುಡೆಣ್ಣೆ, ಕಸ, ಕಡ್ಡಿ, ನಾನು ಕತೆ ಬರೆದು ಹರಿದು ರಾಶಿ ಹಾಕಿದ ಹಾಳೆಗಳು, ಅರಿವೆ, ಎಲ್ಲ ತಂದು ಆ ಕುಂಟೆಯ ಮೇಲೆ ಹಾಕಿ ಬೆಂಕಿ ಕಾಣಿಸಿದರು. 'ಈಗ ನೋಡು ಒಂದು ಕ್ಷಣಕ್ಕೆ ಸೌದೆ ಅರ್ಧ ಆಗತ್ತೆ. ಆ ಮೇಲೆ ಆದರ ಇಜ್ಜಲನ್ನ ಒಲೇಗೆ ಹಾಕಿದರೆ ಸೈ' ಎಂದು ಸಂಭ್ರಮದಿಂದ ತಾಯಿ ಪಕ್ಕದಲ್ಲಿ ಬಂದು ನಿಂತರು. ಉರಿಯೋ ಬೆಂಕೀಲಿ ಸುಟ್ಟಷ್ಟೆ ಲಾಭ ಎಂದು ನನ್ನ ತಂಗಿ ಒಂದು ಬಾಣ ಲೆಯಲ್ಲಿ ರೊಟ್ಟಿ ಹಚ್ಚಿ ತಂದು ಗಂಟುಗನ ತಲೆಯ ಮೇಲಿಟ್ಟಳು! ಮೊದಲು

ಭಗ್ ಎಂದು ಬೆಂಕಿ ಉರಿಯಾಯಿತು. ಹೊಗೆಯಾಯಿತು. ತುಪ್ಪದ ವಾಸನೆ, ಎಣ್ಣೆ ವಾಸನೆ, ವಡೆಯ ವಾಸನೆ ಎಲ್ಲಾ ಕಲಸಿ ಕಲಸಿ ಹೊಗೆ ಯಾಗಿ ಪರಿಣಮಿಸಿತ್ತು, ಸುತ್ತಲ ಸನ್ನಿವೇಶವೆಲ್ಲ. ಎಣ್ಣೆ ಉರಿದು, ಕಾಗದ ಸುಟ್ಟು ಎಲ್ಲ ಬೆಂದು ಬೂದಿಯಾದರೂ ಗಂಟುಗ ಮಾತ್ರ ತಣ್ಣಗೆ, ನಿರ್ವಿ ಕಾರವಾಗಿ ಸಮಾಧಿಯಲ್ಲಿ ಮಲಗಿರುವ ಋಷಿಯಂತೆ ಬಿದ್ದಿದ್ದುದನ್ನು ಕಂಡು ನಮ್ಮ ತಾಯಿ ಪೆಚ್ಚಾದರು. 'ಇದರ ಮನೆ ಹಾಳಾಯ್ತು' ಎಂದ ರಾಜು. 'ಎರಡು ರೂಪಾಯಿ ದಂಡ ಹಾಕಿದೆಯಲ್ಲ ಅಂತೂ' ಅಂದರು ಇನ್ನೊಬ್ಬರು. 'ಅಯ್ಯೋ ಆ ಶನೀನ ಕಟ್ಕೊಂಡೇನು, ಊಟಕ್ಕೆ ಏಳ ಬಾರದೆ' ಅಂತ ರಾಗ ಎಳೆದಳು ನನ್ನ ಹೆಂಡತಿ. ಒಬ್ಬರಿಗೂ ಆ ಗಂಟುಗ ಬೇಡವಾಗಿತ್ತು. ಆದರೆ ಅದನ್ನು ಬಿಸಾಡುವುದಕ್ಕೆ ಯಾರಿಗೂ ಮನಸ್ಸಿಲ್ಲ.

ಪ್ರತಿದಿನ ಬೆಳಗ್ಗೆ ಎದ್ದವರೆಲ್ಲ ಗಂಟುಗನನ್ನು ನೋಡಿ 'ಥೂ, ಇದರ ಮನೆ ಹಾಳಾಗ' ಎನ್ನುವರೆ. ನಾನು ಮಾತ್ರ ಯಾರೂ ಇಲ್ಲದಾಗ ಅದರ ಹತ್ತಿರ ಹೋಗಿ 'ಏನಯ್ಯಾ ಮಿತ್ರ ?' ಎಂದರೆ ಗಂಟುಗ ಮೆಲ್ಲಕ್ಕೆ ಕಣ್ಣು ಬಿಟ್ಟು ಬಾಯಿ ತೆರೆದು 'ಹಿ ಹಿ ಹಿ' ಎನ್ನುತ್ತದೆ.

ಈಗೀಗ ಪ್ರತಿ ದಿನವೂ ಅದು ನನ್ನ ಮಾತಿಗೆ ಉತ್ತರವಾಗಿ ನಗು ತ್ತದೆ. ಹಾಗೆಯೇ ನಗುತ್ತಾ ಇರಲಿ, ಒಂದು ದಿನ ಜೋರಾಗಿ ನಕ್ಕು ದವಡೆ ಹರಿದು, ಹೊಟ್ಟೆ ಬಿರಿದು, ಪಕ್ಕೆಲಬು ತುಂಡಾಗುತ್ತದೆ! ಆಗ ಅದನ್ನು ಒಲೆಗೆ ಹಾಕಿ ಬಿಡುತ್ತೇನೆ!!



# ಕಾಲು ನಡಿಗೆ

"ವಾಹನಗಳಿಗಿಂತ ಕಾಲುನಡಿಗೆಯೇ ಮೇಲು" ಎಂದು ವಾದಿಸುವ ನನ್ನ ಮಿತ್ರರು ವಿಷಯಕ್ಕೆ ಸಂಬಂಧಪಟ್ಟ ಮುಖ್ಯವಾದ ಒಂದು ಅಂಶವನ್ನೇ ಮರೆತಂತೆ ಕಾಣುತ್ತದೆ. ನಾವು ಇಂದು ಮಾತನಾಡುತ್ತಿರುವುದು ವಾಹನಗಳು ಬೇಕೇ ಅಥವಾ ಕಾಲು ನಡಿಗೆ ಬೇಕೇ ಎಂಬ ವಿಷಯವನ್ನು ಕುರಿತು. ಅದು ನಮಗೆ ಸಂಬಂಧಿಸಿದ್ದೇ ಹೊರತು ಪ್ರಾಣಿಗಳಿಗೆ ಸಂಬಂಧಿಸಿದ್ದಲ್ಲ. ಪ್ರಾಣಿದಯೆಯ ಸೋಗಿನಲ್ಲಿ ವಾಹನಗಳೇ ಬೇಡ ಎನ್ನುವವರ ಮಾತು ಹಾಗಿರಲಿ. ನಾವು ಈಗ ವಿಚಾರಮಾಡಬೇಕಾದದ್ದು ಇಷ್ಟನ್ನು. ಮನುಷ್ಯ ಇದ್ದಾನೆ. ಪ್ರಾಣಿ ಇದೆ. ಈ ಮನುಷ್ಯನಿಗೂ ಪ್ರಾಣಿಗೂ ಇರುವ ವ್ಯತ್ಯಾಸವೇನು? ಮುಖ್ಯವಾದ ವ್ಯತ್ಯಾಸವೇನು? ಅದನ್ನು ತಿಳಿಯುವುದರಿಂದ ನಮ್ಮ ಇಂದಿನ ಪ್ರಶ್ನೆಗೆ ಸಮಂಜಸವಾಗಿ ಉತ್ತರ ಕೊಡಬಹುದಲ್ಲವೆ? ವಿಚಾರ ಮಾಡೋಣ. ಪ್ರಾಣಿಗಳಿಗೂ ಬುದ್ಧಿ ಇದೆ. ವಿವೇಚನೆ ಇದೆ, ಸ್ನೇಹ ವಾತ್ಸಲ್ಯಗಳಿವೆ; ಮನುಷ್ಯನಿಗಿಂತ ಹೆಚ್ಚಾಗಿ ಇವೆ. ಮನುಷ್ಯನನ್ನು ಕೂಡ ನಾವು, ಸಿಂಹದಂತೆ ಧೈರ್ಯಶಾಲಿ ಎಂದೂ, ನರಿ ಬುದ್ಧಿಯುವನೆಂದೂ, ಜೇನಿನಂತೆ ಕಾರ್ಯಪರನೆಂದೂ, ನಾಯಿಯಂತೆ ನಂಬಿಕಸ್ಥನೆಂದೂ, ಕುರಿಯಂತೆ ಸಾಧು ಎಂದೂ, ಕತ್ತೆಯಂತೆ ಒರಟನೆಂದೂ, ಹಕ್ಕಿಯಂತೆ ವಿನೋದಪ್ರಿಯನೆಂದೂ, ಆಮೆಯಂತೆ ಮಾನಸ ಪ್ರಕೃತಿಯುವನೆಂದೂ,—ವಿಧವಿಧವಾಗಿ ವರ್ಣಿಸುತ್ತೇವೆ. ಇದನ್ನೆಲ್ಲ ನೋಡಿದರೆ ಮನುಷ್ಯನಿಗೂ ಪ್ರಾಣಿಗಳಿಗೂ ಏನೂ ವ್ಯತ್ಯಾಸವಿಲ್ಲ ಎಂತಲೇ ಭಾಸವಾಗುತ್ತದೆ, ಅಲ್ಲವೆ?

ಪ್ರತಿವಾದಿಗಳು 'ಹು' ಅಂತ ತಲೆಹಾಕುತ್ತಾರೆ ನೋಡಿ. ಪಕ್ಷಪಾತ ಬುದ್ಧಿಯಿಂದ ವಾದ ಮಾಡುವುದಕ್ಕೆ ಪ್ರಾರಂಭಿಸಿದರೆ ಆಗುವುದೇ ಇಷ್ಟು. ಯಾವುದಾದರೂ ಒಂದು ಭಾವನೆ ಮನಸ್ಸಿಗೆ ಬಂದರೆ ಸಾಕು. ಅದನ್ನು ನಂಬಿ, ಅದನ್ನೇ ಐಶ್ವರ್ಯ ಅಂತ ತಿಳಿದು ನೆಲದಲ್ಲಿ ಹುಗಿದಿಟ್ಟು ಕೊಳ್ಳುವುದು. ವಾದ ವಿಚಾರ ಬಂದಾಗಲೆಲ್ಲ ಅದನ್ನು ಸಮರ್ಥಿಸಿ ಮಾತ ನಾಡುವುದು, ಹೀಗೆ ಮಾಡುತ್ತಾರೆ. ಒಂದುಸಾರಿಯಾದರೂ ತಾವು ಹುಗಿದಿಟ್ಟ ಆ ಭಾವನೆಗೆ ಯಾವ ಗತಿಯಾಗಿದೆ, ಅದಕ್ಕೇನು ಹುಳ ಹಿಡಿದಿದೆಯೇ? ಅದೇನು ಕೊಳೆತು ಹೋಗಿದೆಯೇ ಅಂತ ಸಹ ಅವರು ವಿಚಾರಮಾಡುವುದಿಲ್ಲ. ತಪ್ಪು ಇರುವುದು ಅಲ್ಲಿಯೇ. ನಿಷ್ಪಕ್ಷಪಾತ ಬುದ್ಧಿ ವಿವೇಚನೆಯ ಅಡಿಗಲ್ಲು.

ಅದರ ಮೇಲೆ ನಿಂತು ವಿಚಾರ ಮಾಡೋಣ, ಪ್ರಾಣಿಗಳಿಗೂ ಮನುಷ್ಯನಿಗೂ ಇರುವ ವ್ಯತ್ಯಾಸ ಏನು ಎಂದು. ಉತ್ತರ ಅತಿ ದೂರವಿಲ್ಲ. ಪ್ರಾಣಿಗಳಿಗೆ ನಾಲ್ಕು ಕಾಲುಗಳು ಆದರೆ ಮನುಷ್ಯನಿಗೆ ಎರಡೇ. ಆದ್ದರಿಂದಲೇ ನಮ್ಮ ಹಿರಿಯರು ಪಶುಗಳನ್ನು ಚತುಷ್ಪಾದಿಗಳು ಎಂದು ಕರೆದಿದ್ದಾರೆ. ದೇವರು ಯಾವ ಕೆಲಸವನ್ನೂ ಹಿರಿಯ ಉದ್ದೇಶವಿಲ್ಲದೇ ಮಾಡಿಲ್ಲ ಎನ್ನುವುದಾದರೆ ಈ ಎರಡು ಕಾಲು ಮತ್ತು ನಾಲ್ಕು ಕಾಲುಗಳ ವ್ಯತ್ಯಾಸದ ಅರ್ಥವೇನು? ನಡಿಗೆ ಎಂದರೆ ಕಾಲು ನಡಿಗೆ ಎಂದೇ ಅರ್ಥ. ಕಾಲುಗಳು ನಾಲ್ಕು ಇರುವ ಪ್ರಾಣಿಯೂ ನಡೆಯುತ್ತದೆ, ನಾವೂ ಎರಡು ಕಾಲುಗಳಿಂದ ನಡೆಯುತ್ತೇವೆ. ನಮ್ಮಿಬ್ಬರಿಗೂ ನಡಿಗೆ ಸಮಾನ ಧರ್ಮ. ಈ ನಡಿಗೆಯ ಗುರಿ ಏನು? ದಾರಿ ಸಾಗುವುದೇ ಅಲ್ಲವೇ? ಅಷ್ಟೇ ಅಲ್ಲ. ವೇಗವಾಗಿ ದಾರಿ ಸಾಗುವುದು. ಆದ್ದರಿಂದ ವೇಗವೇ ನಡಿಗೆಯ ನಿರ್ಣಾಯಕ. ಕಾಲುಗಳು ಅರ್ಧಕ್ಕರ್ಧ ಕಡಿಮೆ ಇರುವುದರಿಂದ ಮನುಷ್ಯ ಪ್ರಾಣಿಗಳಷ್ಟು ವೇಗವಾಗಿ ನಡೆಯಲಾರ. ಇದನ್ನು ತಿಳಿದಿದ್ದರಿಂದಲೇ ದೇವರು ಪ್ರಾಣಿಗಳಿಗೆ ಕಾಲುನಡಿಗೆ ಎಂತಲೂ ಮನುಷ್ಯನಿಗೆ ವಾಹನಗಳು ಎಂತಲೂ ವಿಧಿಸಿದ್ದಾನೆ.

ಹಕ್ಕಿಗಳಿಗೂ ಎರಡು ಕಾಲುಗಳಿವೆ, ಮನುಷ್ಯನಿಗಿರುವಂತೆ. ಆದ್ದರಿಂದ ನಿಮ್ಮ ಈ ಕಾಲು–ಪ್ರಶ್ನೆ ಅಷ್ಟು ಸರಿಯಾದುದಲ್ಲ ಎಂದು ನನ್ನ

ಸ್ನೇಹಿತರು ವಾದಿಸಬಹುದು. ಹಾಗೆ ಮಾಡುವರೆಂದೂ ನನಗೆ ಗೊತ್ತು. ಅವರು ಇಷ್ಟು ವಿಚಾರ ಮಾಡಬೇಕು. " Man is featherless biped " ಎಂದು ಒಂದು ಮಾತಿದೆ. ಅದರ ಅರ್ಥ ಮನುಷ್ಯ ಪಕ್ಷರಹಿತನಾದ ದ್ವಿಪಾದಿ ಎಂದು. ಇದು ನನ್ನ ಮಾತಲ್ಲ. ಹಿರಿಯ ತತ್ವಜ್ಞಾನಿಯೊಬ್ಬರ ವೇದವಾಕ್ಯ. ಅದರಲ್ಲಿ ಮನುಷ್ಯನಿಗೆ ರೆಕ್ಕೆ ಇಲ್ಲ ಎಂಬ ಭಾವನೆ ಖಚಿತ ವಾಗಿದೆ. ಮನುಷ್ಯನಿಗೂ ಹಕ್ಕಿಗೂ ವ್ಯತ್ಯಾಸವಿರುವುದು ಪಾದದಲ್ಲಲ್ಲ ಪಕ್ಷದಲ್ಲಿ. ನಮಗೂ ನಾಳೆ ಬೆಳಿಗ್ಗೆ ಹೊತ್ತಿಗೆ ರೆಕ್ಕೆ ಬರುವಪಕ್ಷಕ್ಕೆ ಕಾಲು ನಡಿಗೆಯ ಜಂಜಾಟವೇ ಅನವಶ್ಯಕವಲ್ಲವೇ ?

" ಕಾಲು " ಎಂಬ ಮಾತು ಕಿವಿಗೆ ಬಿದ್ದ ಒಡನೆಯೇ ಕಾಲಿನ ಪ್ರಯೋಜನ ಏನು ? ಎಂಬ ಪ್ರಶ್ನೆ ಮೂಡುವುದು ಸ್ವಾಭಾವಿಕ. ಕಾಲು ಇರುವುದು ನಡೆಯುವುದಕ್ಕೆ ಎಂದು ನಂಬಿ ಮುಂದೆ ವಾದವನ್ನು ಬೆಳಿಸು ವುದು ದಡ್ಡತನ. ನಮ್ಮ ಕಾಲುಗಳು ಇರುವುದು ನಡಿಗೆಗಂತೂ ಅಲ್ಲ ಎಂದು ನಾನು ವಿಮರ್ಶಿಸಿದ್ದೇನೆ. ಇನ್ನು ಕಾಲಿನ ಉಪಯೋಗವನ್ನು ನೋಡೋಣ. ಕಾಲು ಇರುವುದು ಪರದೇಶದ ಮಲ್ ಪಂಚೆ ಉಡುವು ದಕ್ಕೆ, ಉಲ್ಲನ್ ಸೂಟ್ ಧರಿಸುವುದಕ್ಕೆ, ಜಾರ್ಜೆಟ್ ಸೀರೆಗಳನ್ನು ಉಡು ವುದಕ್ಕೆ, ಬಾಟಾ ಚಪ್ಪಲಿ ಹಾಕುವುದಕ್ಕೆ. ಇಂಥಾ ಕೋಮಲವಾದ ಕಾಲು ಗಳನ್ನು ನಡೆಯುವುದಕ್ಕೆ ಉಪಯೋಗಿಸುವುದು ಯಾವ ನ್ಯಾಯ, ಯಾವ ಸತ್ಯ ? ತಲೆಯಮೇಲೆ ಮೂರು ಕಾಸಿನ ಟೋಪಿ ಇಲ್ಲದಿದ್ದರೂ ಕಾಲಿನಲ್ಲಿ ಐದು ರೂಪಾಯಿ ಚಪ್ಪಲಿ, ಐವತ್ತು ರೂಪಾಯಿ ಪಯಿಜಾಮ. ಕಾಲಿಗೆ ತಲೆಗಿಂತ ಅಷ್ಟರಮಟ್ಟಿನ ಪ್ರಾಶಸ್ತ್ಯವಿದೆ. ಅದಕ್ಕಾಗಿಯೇ ನಮ್ಮ ಸಂಪ್ರ ದಾಯದಲ್ಲಿ ನಮಸ್ಕಾರವನ್ನು ಕಾಲಿಗೇ ಮಾಡುತ್ತಾರೆ, ಕಾಲು ಮುಟ್ಟಿ, ತಲೆಯನ್ನು ಕಾಲಿಗೆ ತಗುಲಿಸಿ, ಉತ್ತಮಾಂಗದಲ್ಲಿ ಪಾದಪರಾಗವನ್ನು ಧರಿಸುತ್ತಾರೆ. ಇದನ್ನೆಲ್ಲಾ ನಾವು ಮರೆಯುವುದಕ್ಕಾಗುತ್ತದೆಯೆ ? ಕಾಲಿನ ಉಪಯೋಗ ಅಷ್ಟೇ ಅಲ್ಲ. ಕಾಲು ಇನ್ನೊಬ್ಬರನ್ನು ತುಳಿಯಲು ಸಹಕಾರಿಯಾಗುತ್ತದೆ. ಕಾಲಿನಿಂದ ಮತ್ತೊಬ್ಬರನ್ನು ಒದೆಯಬಹುದು, ಮುಗುದೊಬ್ಬರ ಮುಂದೆ ಕಾಲುಚಾಚಿ ಕುಳಿತು ಅವರಿಗೆ ಅಪಮಾನ ಮಾಡಬಹುದು. ಕಾಲು ಅನೇಕ ಯುದ್ಧಗಳಿಗೆ ಕಾರಣವಾಗಿರುವ ವಿಷ

ಯವು ಚಾರಿತ್ರಿಕವಾಗಿ ನಿಂತಿದೆ. ಅದನ್ನು ಕೆರೆದರೆ ಜಗಳಕ್ಕೆ ಹಸೆ ಹಾಕಿದಂತೆಯೇ. ಕಾಲು ಕೆರೆದು ಜಗಳಮಾಡಿದ ಅನ್ನೋಮಾತು ಸತ್ಯ. ಜರ್ಮನಿ ಪೋಲೆಂಡಿನ ಕಾಲು ಕೆರೆಯಿತು. ಸರಿ ಯುದ್ಧವಾಯಿತು. ಇಂಥಾ ಬಹು ಮುಖ್ಯವಾದ ಕಾಲನ್ನು ನ-ಡಿ-ಗೆ-ಗೆ ಹೇಗೆ ಉಪಯೋಗಿಸಬೇಕು ?

ದೇಶ ದೇಶವನ್ನು, ಜನರನ್ನು ಜನ, ಕರಿಯವರನ್ನು ಬಿಳಿಯ ಮಂದಿ, ಪ್ರಜೆಗಳನ್ನು ರಾಜರು, ಅಧಿಕಾರಿಗಳು ಇತರರನ್ನು ತುಳಿಯುತ್ತಲಿರುವ ವಿಷಯ ಓದುಗರಿಗೆ ಹೊಸತಲ್ಲ. ಧರ್ಮ ಅಧರ್ಮವನ್ನು ತುಳಿಯಲಿ ಎನ್ನುತ್ತೇವೆ ನಾವು. ಈ ಕಾರ್ಯದಲ್ಲಿ ಮುಖ್ಯ ಆಯುಧವಾವುದು ಎಂದು ಮತ್ತೆ ನಾನು ಹೇಳಬೇಕೇನು ?

ಇನ್ನು ಪುರಾಣಗಳ ಮಾತು. ಬ್ರಹ್ಮ, ವಿಷ್ಣು, ಮಹೇಶ್ವರರು ಕ್ರಮವಾಗಿ ಹಂಸ, ಗರುಡ, ಮತ್ತು ಎತ್ತುಗಳನ್ನು ತಮ್ಮ ವಾಹನಗಳನ್ನಾಗಿ ಮಾಡಿಕೊಂಡಿದ್ದಾರೆ. ತ್ರಿಮೂರ್ತಿಗಳಿಗಿಲ್ಲದ ಪ್ರಾಣಿದಯೆ ನಮಗೇಕೆ ? ಹಕ್ಕಿ ಪಕ್ಷಿಗಳ ಮೇಲೆ ಅವರು ಸವಾರಿಮಾಡುತ್ತಿರುವಾಗ ಆನೆಯಮೇಲೆ ಕುದುರೆಯಮೇಲೆ ನಾವೇಕೆ ಹತ್ತಬಾರದು ? ಅಷ್ಟದಿಕ್ಪಾಲಕರಲ್ಲಿ ಒಬ್ಬನು ಮನುಷ್ಯನನ್ನೇ ತನ್ನ ವಾಹನವಾಗಿ ಉಪಯೋಗಿಸುತ್ತಾನಂತೆ. ಅವನು ನರವಾಹನನಾದ ಕುಬೇರನಂತೆ. ಅವನು ವಿಶ್ವ ಭಂಡಾರದ ಒಡೆಯನಂತೆ. ನಾವುಮಾತ್ರ ರಿಕ್ಷಾ ಪ್ರಯಾಣಕೂಡ ಸರಿಯಲ್ಲ ಎಂದು ಸಾಧುಗಳಂತೆ ಮಾತನಾಡುತ್ತೇವೆ. ಭಾರತದ ಇಂದಿನ ಬಡತನ, ದಾರಿದ್ರ್ಯ, ರಿಕ್ತತೆ, ಇವೆಲ್ಲ ಮಾಯವಾಗಬೇಕಾದರೆ ನಾವೂ ಕುಬೇರ-ಮತಿಗಳಾಗಬೇಕು !

ದೇವತೆಗಳ ವಾಹನ ಪ್ರಿಯತೆಗೆ ಇನ್ನೊಂದು ನಿದರ್ಶನ. ಈಗಿನ ಕಾಲದಲ್ಲಿ ಡಿಗ್ರಿಗಳನ್ನು ನಮ್ಮ ಹೆಸರಿನ ಕೊನೆಯಲ್ಲಿ ನಾವು ಸೇರಿಸಿಕೊಳ್ಳುವಂತೆ ದೇವತೆಗಳು ವಾಹನಗಳ ಹೆಸರುಗಳನ್ನು ತಮ್ಮ ನಾಮಾಂಕಿತದ ಮೊದಲಿನಲ್ಲಿ ಸೇರಿಸುವ ಆಶೆಗೆ ಮನವಿತ್ತಿದ್ದರು. ಪಕ್ಷಿವಾಹನ, ಬಬ್ರುವಾಹನ, ಮೂಷಕವಾಹನ, ಜೀಮೂತವಾಹನ, ಹೀಗೆ ನೀವು ಎಷ್ಟು ವಸ್ತುಗಳ ಹೆಸರನ್ನಾದರೂ ಹೇಳಿರಿ, ಅವುಗಳ ಬೆನ್ನಿನ ಮೇಲೆಲ್ಲಾ ಒಬ್ಬೊಬ್ಬ ದೇವತೆ ಸಿದ್ಧ ಅಂತಲೇ ಸರಿ !

ಸಮಾಜ ದೃಷ್ಟಿಯಿಂದ ಕಾಲಿನ ಸ್ಥಾನಮಾನಗಳನ್ನು ವಿಚಾರಮಾಡಿ ನೋಡೋಣ. ಈ ಕಾಲದಲ್ಲಿ ಪಾದಪೂಜೆ, ಪಾದರಕ್ಷಾಪೂಜೆಯ ವಿಷಯ ದಿನಪತ್ರಿಕೆಯ ವಿಚಾರವಾಗಿದೆ. ಪಾದರಕ್ಷಾ ಪೂಜೆ ಭರತನ ಕಾಲಕ್ಕೇ ಮುಗಿಯಲಿಲ್ಲ. ಆ ರಾಮರಾಜ್ಯ ಇಂದೂ ನಡೆದುಬರುತ್ತಿದೆ. ನಮ್ಮ ಜನ ಆದರ್ಶ ಪ್ರಿಯರು, ಆದರ್ಶ ಪರಿಪಾಲಕರು ಎಂಬುದಕ್ಕೆ ಇನ್ನೆಷ್ಟು ಉದಾಹರಣೆ ಬೇಕು! ಇನ್ನೂ ಪಾದರಸವನ್ನು ಕುಡಿದವರೂ ಕುಡಿದು ಬದುಕುವವರೂ ನಮ್ಮಲ್ಲಿ ವಿರಳರಲ್ಲ. ಯಾವ ದೃಷ್ಟಿಯಿಂದ ಪರಿಶೀಲಿಸಿದರೂ ಕಾಲು ಇಷ್ಟು ಪ್ರಮುಖವಾಗಿರುವಾಗ ಕಾಲನ್ನು ಮನುಷ್ಯನ ತಲೆ ಎಂದೇತಕ್ಕೆ ಕರೆಯಬಾರದು ಅನ್ನಿಸದಿರಲಾರದು.

ಇಷ್ಟೆಲ್ಲ ಕೇವಲ ತರ್ಕವಾಯಿತು ಎನ್ನುವ ಪಕ್ಷಕ್ಕೆ ಅಸಲು ಮಾತೊಂದನ್ನು ಹೇಳುತ್ತೇನೆ, ಲಾಲಿಸಬೇಕು. ಊರಿನಲ್ಲಿರುವವರು ಎಂದಮೇಲೆ ರಸ್ತೆಗಳನ್ನು ನೋಡಿದ್ದೇವೆ. ದೊಡ್ಡ ರಸ್ತೆಗಳಿವೆ, ಇಕ್ಕಟ್ಟಾದ ರಸ್ತೆಗಳಿವೆ. ರಸ್ತೆಯ ಎರಡು ಪಕ್ಕಗಳಲ್ಲೂ ಕಾಲುದಾರಿಗಳಿರುತ್ತವೆ. ಈಗ ವಿಚಾರಮಾಡೋಣ, ಈ ರಸ್ತೆಗಳು ಇರುವುದು ಏತಕ್ಕೆ ಎಂದು. ರಸ್ತೆಗಳು ಇರುವುದು ಓಡಾಟಕ್ಕಲ್ಲ ಎಂದು ನಮಗಲ್ಲದಿದ್ದರೂ ಪ್ರತಿಯೊಬ್ಬ ಪೋಲಿಸಿನವನಿಗಾದರೂ ತಿಳಿದಿದೆ. ರಸ್ತೆಗಳು ಇರುವುದು ವಾಹನಗಳಿಗಾಗಿ. ಮೋಟಾರು, ಸೈಕಲ್, ಜಟಕಾ, ಬಸ್ಸು ಆದಿಯಾದ ನೂರಾರು ವಾಹನಗಳು ಎದುರುಬದುರಾಗಿ ಓಡಾಡುತ್ತಿರುವಾಗ ಮನುಷ್ಯ ರಸ್ತೆಯಲ್ಲಿ ಉದ್ದುದ್ದವಾಗಿ ನಡೆಯುವುದು ಹಾಗಿರಲಿ ಅಡ್ಡವಾಗಿ ಸಹ ಓಡಲಾರ. ರಸ್ತೆಯನ್ನು ದಾಟಲಾರ. ಅಂಥಾ ಸಾಹಸಕ್ಕೆ ಕೈಹಾಕುವವರು "ಇನ್ನು ಹಿಂತಿರುಗಿ ಬರ್ತೇನೋ ಇಲ್ವೋ ಗೊತ್ತಿಲ್ಲ" ಅಂತ ಮನೇಲಿ ಹೇಳಿ ಬರುವುದೇ ಉತ್ತಮ. ಕಾಲು ನಡಿಗೆಗೆ ಇಷ್ಟೆಲ್ಲ ಕಳಂಕಗಳಿರುವಾಗ ಅದನ್ನೇ ಪ್ರತಿಪಾದಿಸುವ ತರ್ಕವು ನ್ಯಾಯಬದ್ಧವೆ? ಜನಕ್ಕೆ ಅದು ಬೇಡ. ಕಾಲ ಅದಕ್ಕೆ ವಿರುದ್ಧವಾಗಿದೆ. ಕಾಲೂ ವಿರುದ್ಧವಾಗಿದೆ. ಅಂಥದನ್ನು ಹೇಗೆತಾನೆ ಉಳಿಸಿಕೊಳ್ಳಲು ಸಾಧ್ಯ? ಸುಳ್ಳು–ನಿಜ, ಮಡಿ–ಮೈಲಿಗೆ, ಹೋಟಲು–ಉಪಾಸಲು, ಧರ್ಮ–ಅಧರ್ಮ, ಪಾಪ–ಪುಣ್ಯ ಮತ್ತು ಕಾಲುನಡಿಗೆ–ವಾಹನಗಳು ಇವೆಲ್ಲ ಪರಸ್ಪರ ವಿರುದ್ಧವಾದವುಗಳು.

ಒಂದನ್ನು ಹಿಡಿದರೆ ಮತ್ತೊಂದು ಕಳಚಿಬೀಳುತ್ತದೆ. ಒಂದನ್ನು ಹಿಂಬಾಲಿಸಿದರೆ ಮತ್ತೊಂದು ದೂರವಾಗುತ್ತದೆ. ಕಾಲಗತಿಗೆ ಅನುಕೂಲವಾಗಿ ಕಾಲುನಡಿಗೆಯನ್ನು ವಿರೋಧಿಸಿ ವಾಹನಗಳನ್ನು ನಾವು ಸ್ವೀಕರಿಸಬೇಕು. ಆಧುನಿಕ ವಿಜ್ಞಾನದ ಫಲವಾಗಿ ಮನುಷ್ಯ ಯಾವ ಸುಖವನ್ನು ಪಡೆಯದಿದ್ದರೂ ಕಾಲ ದೇಶಗಳನ್ನು ಗೆದ್ದಿದ್ದಾನೆ. ಅದಕ್ಕೆ ಸೂಚನೆಯೋ ಎಂಬಂತೆ ಸರ್ಕಾರದವರು ರಸ್ತೆಗಳನ್ನು ಅಗಲವಾಗಿ ಮಾಡಿ ಕಾಲುದಾರಿಗಳನ್ನು ಕಿರಿದಾಗಿ ಮಾಡಿದ್ದಾರೆ. ಕಾಲುದಾರಿಗಳು ನಶಿಸಿ ಮಾಯವಾಗುತ್ತಿರುವುದಂತೂ ನಮಗೊಂದು ಶುಭ ಸೂಚನೆ. ಇಂಥಾ ಯುಗಪ್ರವಾಹದ ಮುಂದೆ ನಿಂತು ಬದುಕಬಲ್ಲವರಾರು?

ಇದುವರೆಗೂ ನನ್ನ ಮಾತನ್ನು ಕೇಳಿದವರಿಗೆ, ವಾಹನಗಳು ಬೇಕು ಎನ್ನುವುದಕ್ಕಿಂತ ಕಾಲುನಡಿಗೆ ಬೇಡ ಎನ್ನುವುದೇ ನನ್ನ ವಾದ ಎಂದು ಅರ್ಥವಾಗಿರಬೇಕು. ಇನ್ನು ವಾದ ಸಾಕು. ಕಾಂತಾ ಸಮ್ಮಿತವಾಗಿ ಒಂದು ಸವಿನುಡಿಯನ್ನು ಹೇಳುತ್ತೇನೆ:—

ಆಡಿಬಾ ಕಂದಯ್ಯ
    ಅಂಗಾಲ ತೊಳೆದೇನು
ತೆಂಗೀನ ಕಾಯಿ
    ತಿಳಿನೀರು–ತಕ್ಕೊಂಡು
ಬಂಗಾರದ ಪಾದ
    ತೊಳೆದೇನು.

ಎಂದು ನಮ್ಮ ನಾಡಿನ ಹೆಣ್ಣುಮಕ್ಕಳು ಹಾಡಿ ಹರಸಿ ನಿಮ್ಮ ಕಾಲುಗಳನ್ನು ಬುದ್ಧಿಗಿಂತ ಹೆಚ್ಚಾಗಿ ಬೆಳೆಸಿದ್ದಾರೆ. ಅಂಥಾ ಬಂಗಾರದ ಪಾದವನ್ನು ನಡೆಯುವುದಕ್ಕೆ ಉಪಯೋಗಿಸಲು ನಿಮಗೆ ಮನಸ್ಸು ಬಂದೀತೆ? ನಮ್ಮ ಪ್ರತಿಪಕ್ಷದವರು ಕಾಲನ್ನು ಓಡಿಸುವುದರ ಬದಲು ಸ್ವಲ್ಪ ತಲೆಯನ್ನು ಓಡಿಸಿದ್ದರೆ ನಾನು ಇಷ್ಟುಕಾಲ ವಾದ ಮಾಡುವ ಅವಶ್ಯಕತೆ ಇರುತ್ತಿರಲಿಲ್ಲ!



[3]

# ಜಾಹಿರಾತು

ರಸ್ತೆಯಲ್ಲಿ ಕಣ್ಣು ಮುಚ್ಚಿಕೊಂಡು ಓಡಾಡುವುದೇ ಸರಿ ಎಂದು ನನ್ನ ನಂಬಿಕೆ. ಅದರಿಂದ ಸ್ವಲ್ಪ ತೊಂದರೆ ಏನೋ ಆಗುತ್ತದೆ. ಅಕಸ್ಮಾತ್ ಕಲ್ಲು ಎಡವಿ ಬೀಳಬಹುದು. ಇಲ್ಲವೆ ನಾಲ್ಕಾರು ಜನರನ್ನು ಢಿಕ್ಕಿ ಹೊಡೆದು ಎರಡು ಏಟು ತಿನ್ನಬಹುದು. ಅದೆಲ್ಲ ನಿಜ. ಆದರೆ ಅದರಿಂದ ಆಗುವ ನಷ್ಟಕ್ಕಿಂತ ಲಾಭವೇ ಹೆಚ್ಚು. ಹೇಗೆಂದರೆ ಕಣ್ಣು ಮುಚ್ಚಿಕೊಂಡು ಸರಸರ ನಡೆದರೆ ದಾರಿ ಬಹು ಬೇಗ ಸಾಗುತ್ತದೆ. ತಪ್ಪುವ ಗೈಲೂ ಕೂಡ ಸಿಗುವ ಸಂಭವ ಉಂಟು. ಅದೇ ಮನುಷ್ಯ ಕಣ್ಣುಬಿಟ್ಟು ಬಿಟ್ಟುಕೊಂಡು ನಡೆದ ಅನ್ನಿ. ಅವನ ಅವಸ್ಥೆ ಪರಮಾತ್ಮನಿಗೇ ಗೊತ್ತು. ಎದುರಿಗೆ, ಅಕ್ಕಪಕ್ಕಗಳಲ್ಲಿ, ಅಂಗಡಿಗಳ ಮೇಲೆ, ಗಾಡಿಗಳ ಹೊರಗೆ, ಕಾಂಪೌಂಡಿನ ಸುತ್ತ—ಎಲ್ಲಿ ನೋಡಿದರೂ ಬೋರ್ಡುಗಳೇ ಕಾಣುತ್ತವೆ. ಅವುಗಳನ್ನೆಲ್ಲ ಓದುವ ಚಪಲ ಸಹಜವಾಗಿ ಉಂಟಾಗುತ್ತದೆ. ಓದುತ್ತಿದ್ದಂತೆಯೇ ನಂಬುವಂತಾಗುತ್ತದೆ. ನಂಬಿದರೆ ಮನುಷ್ಯ ಕೆಟ್ಟ ಅಂತಲೇ ಲಕ್ಷ್ಯ. 'ಹಸನಾದ ತುಪ್ಪ! ಶುಚಿ! ರುಚಿ' ಎಂದು ಬಾಯಲ್ಲಿ ಹೇಳುತ್ತಿದ್ದಂತೆಯೇ ನಾಲಗೆಯಲ್ಲಿ ನೀರೂರುತ್ತದೆ. ನಿಜವಿರಬೇಕು ಎಂದು ಹೋಟಲಿಗೆ ಹೋದರೆ ಮುಂದೆ ಗತಿ? ದೇವೇಂದ್ರ ಭವನದಲ್ಲಿ ರಾಗಿ ದೋಸೆ, ಸಿತ್ಯಾನಂದ ವಿಲಾಸದಲ್ಲಿ ಕಣ್ಣೀರು ಕಾಫಿ, ಗೋಪಾಲಭವನದಲ್ಲಿ ಬೆಣ್ಣೆಗೇ ಗತಿ ಇಲ್ಲ, ಸೂರ್ಯ ಭವನದಲ್ಲಂತೂ ಸದಾ ಕತ್ತಲು! ಇದನ್ನೆಲ್ಲ ನೋಡಿದರೆ "ಬೋರ್ಡು ನಂಬಿ ಬಡವ ಕೆಟ್ಟ" ಎನ್ನುವ ಗಾದೆ ನಿಜವಾಗಿ ಕಾಣುತ್ತದೆ. ಇನ್ನು ನಮ್ಮ ಎಡಗಡೆ ಮಹಡಿಯ ಮೇಲಿರುವ ಬೋರ್ಡನ್ನು ನೋಡಿ. "ನಿಮ್ಮ ಆರೋಗ್ಯಕ್ಕೆ

ಗೋಲ್ಡ್‌ಫ್ಲೇಕ್ ಸಿಗರೇಟುಗಳನ್ನೇ ಸೇದಿ" ಎಂದು ಬರೆದಿದೆ. ಆರೋಗ್ಯ ವಿಚಾರ ಅಂದರೆ ಎಲ್ಲರಿಗೂ ಆಸಕ್ತಿ ಹೆಚ್ಚು. ಅಂಗಡಿಗೆ ಹೋಗಿ "ಕೊಡಪ್ಪ ನನಗೆರಡು" ಅಂದರೆ ಅವನು ನಿರುತ್ಸಾಹದಿಂದ "ಮಾಲು ಸ್ಟಾಕ್ ಇಲ್ಲ ಸಾರ್" ಎನ್ನುತ್ತಾನೆ 'ಯಾವಾಗಬರುತ್ತೆ?' ಅಂತ ಕೇಳಿದರೆ 'ಇನ್ನೂ ನಾಲ್ಕು' ವರ್ಷ ಆಗಬಹುದು, ಎನ್ನುತ್ತಾನೆ. ಇಂಥಾ ಸ್ಥಿತಿಯಲ್ಲಿ ಏನು ಮಾಡಲಾಗುತ್ತೆ? ಬಂದ ದಾರಿಗೆ ಸುಂಕ ಇಲ್ಲ ಅಂತ ಹೋಗು ವುದೇ, ಅಥವಾ ಸಿಗರೇಟಿಗಾಗಿ ಶಬರಿಯ ಹಾಗೆ ಕಾಯಬೇಕೇ!

ಇಷ್ಟಾದರೂ ಒಂದೊಂದು ಸಾರಿ ರಸ್ತೆಯ ಪಕ್ಕದ ಎಲ್ಲ ಬೋರ್ಡು ಗಳನ್ನೂ ಓದದೆ ಮುಂದೆ ಹೆಜ್ಜೆ ಇಡಲು ಮನಸ್ಸೇ ಆಗುವುದಿಲ್ಲ. ಈಗಂತೂ ಪತ್ರಿಕೆಗಳನ್ನು ನೋಡಿ; ಕನ್ನಡ ಇಂಗ್ಲೀಷು ತಮಿಳು ಯಾವ ಭಾಷೆಯದೇ ಆಗಲಿ. ಪತ್ರಿಕೆಗಳನ್ನು ಕೊಂಡುಕೊಳ್ಳುವುದು ಏತಕ್ಕಾಗಿ? ಏನು ಅಮೆರಿ ಯವರ ಭಾಷಣ, ಸಪ್ರೂ ಸಲಹೆಗಳು, ಮಹಾತ್ಮರ ಮೌನ, ತ್ರಿರಾಷ್ಟ್ರ ಸಂಧಾನ, ಟೈಗರ್ ಟ್ಯಾಂಕುಗಳ ಭಾರತಯುದ್ಧ ಇವುಗಳನ್ನು ಓದುವುದಕ್ಕೆ ಎಂದು ತಿಳಿದಿರೇನು? ಅದೇನು ಮಹಾ. ನಮ್ಮ ದಿನದ ಕಾಸು ಹರಟೆ ಯಲ್ಲಿ ಸಪ್ತಲೋಕದ ಸಮಾಚಾರವೂ ಒಂದಕ್ಕೆ ಹತ್ತಾಗಿ, ಜಿಲೆಯಂತಿ ದ್ದುದು ಜಿರಾಫೆಯಾಗಿ ಬರುತ್ತವೆ, ಹೋಗುತ್ತವೆ. ವಿಷಯ ಯಾವಾ ಗಲೂ ಮುಖ್ಯವಲ್ಲ. ಪತ್ರಿಕೆಗಳಲ್ಲಿನ ಪ್ರಕಟನೆಗಳನ್ನು ಓದುವುದೇ ನಮ್ಮ ಗುರಿಯಾಗಬೇಕು. ಪ್ರಕಟಣೆಗಳದ್ದು ನಿಜವಾಗಿ ಒಂದು ದೊಡ್ಡ ಸಂಸಾರ. ಒಂದೊಂದು ಜಾಹಿರಾತೂ ಕೂಡ ಒಂದೊಂದು ವ್ಯಕ್ತಿಯನ್ನು ವಿವರಿ ಸುತ್ತದೆ. "ಮೋಸವಿಲ್ಲ. ಖಚಿತವಾದ ಬೆಲೆ. ನಮ್ಮ ಧರ್ಮದ ಅಂಗ ಡಿಗೇ ಬನ್ನಿ" ಎನ್ನುವ ಪಾಂಡವರು, 'ನಕಲಿ ಮಾಲುಗಳು ಬರುತ್ತವೆ ಎಚ್ಚರಿಕೆ' ಎಂದು ಹೊಡೆದೆಬ್ಬಿಸುವ ಹಿತಚಿಂತಕರು, ಸೋಪು ಬ್ರಷ್ಷು ಕೊನೆಗೆ ಕತ್ತಿ ಏನೂ ಇಲ್ಲದೆ ಸುಖಕ್ಷೌರಕ್ಕೆ ಉಪಾಯವನ್ನು ಹುಡುಕಿ ರುವ 'ದಮನಕರು,' ಭವಿಷ್ಯಕ್ಕೆ ಉಳಿಸಿರಿ ಆದಷ್ಟು ಕಡಿಮೆ ಪ್ರಯಾಣ ಮಾಡಿ. ಅವಶ್ಯವಲ್ಲದೆ ಮಾತನಾಡಬೇಡಿ.' ಎಂದು ಶಾಸನ ಹಾಕಿಸಿರುವ ದೇವಾನಾಂ ಪ್ರಿಯರು, ವಧುವಿಗಾಗಿ ಕೊರಗುವ ವರಗಳು, ಮನೆ ಮಾರು ವವರು, ಸೈಟು ಹರಾಜು ಹಾಕುವವರು, ಭವಿಷ್ಯಬ್ರಹ್ಮರು, ಕಾಸಿಲ್ಲದೆ

ಫ್ರಿ ಆಗಿ ಇನ್ಸೂರು ಬಹುಮಾನಗಳನ್ನು ಕೊಡುವ ದಡ್ಡರು, ಕುರೂಪಿಗಳನ್ನು ಹತ್ತು ದಿನದಲ್ಲೇ ಸುರೂಪಿಗಳನ್ನಾಗಿ ಮಾಡುವ ಶ್ರೀರಾಮರು ಇವರೆಲ್ಲ ಆ ಪ್ರಕಟಣಾ ಪ್ರಪಂಚದ ಕೆಲವು ವ್ಯಕ್ತಿಗಳು. ಅವರಿಗೆ ತಿಳಿಯದ ಪದಾರ್ಥವೇ ಇಲ್ಲ. ಮನುಷ್ಯ ಎದ್ದು ಕಣ್ಣು ಉಜ್ಜಿಕೊಳ್ಳುತ್ತಾ ಹಲ್ಲುಪುಡಿ ಹುಡುಕುವ ಹೊತ್ತಿನಿಂದ, ಅವನು ರಾತ್ರಿ ಹನ್ನೆರಡಕ್ಕೆ ಹಾಸಿಗೆಯ ಮೇಲೆ ಬೀಳುವವರೆಗೂ ಅವನಿಗೆ ಬೇಕಾಗಬಹುದಾದ, ಬೇಡವಾದ ಎಲ್ಲ ವಸ್ತುಗಳಿಗೂ ಒಂದು ಪ್ರಕಟನೆ ಸಿದ್ಧ. ಅವುಗಳನ್ನೆಲ್ಲಾ ನೆನಸಿಕೊಂಡರೆ ನಮ್ಮ ಪರ್ಸು ಎಷ್ಟು ಚಿಕ್ಕದು ಅನ್ನಿಸುತ್ತದೆ. ಒಂದು ವೇಳೆ ಅವುಗಳನ್ನೆಲ್ಲ ಹೇಗಾದರೂ ಮಾಡಿಕೊಂಡು ಕೊಳ್ಳೋಣ ಎಂದರೆ ಮನೆ ಎಲ್ಲ ಅಂಗಡಿ ಆಗಿಬಿಡುತ್ತೆ.

ರಸಿಕರಾದ ನಾವು ಜಾಹಿರಾತುಗಳಲ್ಲಿನ ಚಿತ್ರ ಕಲೆಯನ್ನು ನೋಡಿ ಆನಂದಿಸದೆ ಇರಬಾರದು. ಮಹಾತ್ಮಗಾಂಧಿ ಕೈಮುಗಿದುಕೊಂಡು, ಕನ್ನಡಕದ ಮಧ್ಯೆ ಕಣ್ಣುಗಳನ್ನು ಅರ್ಧ ಮುಚ್ಚಿ ನಗುತ್ತಿರುವ ಚಿತ್ರ. ಅದನ್ನು ನೋಡಿದರೆ ನಮಸ್ಕಾರ ಮಾಡುವ ಆಶೆಯಾಗುತ್ತದೆ. ಆದರೆ ಆ ಚಿತ್ರದ ಕೆಳಗೆ ನೋಡಿದರೆ "ಮಹಾತ್ಮಾ ಬೀಡಿಗಳನ್ನೇ ಸೇದಿರಿ" ಎಂದು ಬರೆದಿದೆ. ಊಟ ಮನೆ ಮಠ ಎಲ್ಲ ಬಿಟ್ಟು ಇಷ್ಟು ಹಾಲು ಕಡ್ಲೆಕಾಯಿ ತಿಂದು ಖುಷಿಯಿಂತಿರುವ ಮಹಾತ್ಮರ ಹೆಸರಿನಲ್ಲಿ ಬೀಡಿ! "ಕಲಿಯುಗದ ಮಹಿಮೆಯು ಕಾಣಬಂತೀಗ" ಎಂದು ದಾಸವರ್ಯರು ಹೇಳಿರುವ ನುಡಿ ನಿಜವಿರಬೇಕು. ಕೃಷ್ಣ ಏನೋ ತುಂಟ. ಅವನು ಹುಡುಗನಾಗಿದ್ದಾಗ ಅಂತಹ ಕೆಲಸ ಮಾಡಿದ್ದನೆಂದರೆ ಅಷ್ಟು ತಪ್ಪಾಗಲಾರದು. ಆದರೆ ಗಣಪತಿ ಬೀಡಿ ಎಂದರೆ ಯಾವ ನ್ಯಾಯ? ಗಣೇಶನ ಪೂಜೆಯ ದಿನ ಮೋದಕಪ್ರಿಯ, ಮೂಷಕ ವಾಹನ ಎಂದು ಹೊಗಳುತ್ತೇವೆ. ಈಗ ಬೀಡಿಪ್ರಿಯ ಗಾಡಿವಾಹನ ಎನ್ನಬೇಕೇನು?

ಜಾಹಿರಾತುಗಳ ಪರಿಚಯ ಹೆಚ್ಚಿದಷ್ಟು ಮನುಷ್ಯನ ಜ್ಞಾನ ಅಭಿವೃದ್ಧಿಯಾಗುತ್ತದೆ. ಮಕ್ಕಳ ಸ್ಕೂಲು ಮನೇ ಲಲ್ವೆ ಅಂತ ಕೈಲಾಸಂ ಹೇಳಿರೋ ಹಾಗೆ ಪ್ರಬುದ್ಧರ ಶಾಲೆ ಪ್ರಕಟನೆಗಳಲ್ಲಿ! ಅಲ್ಲಿ ರಾಜಕೀಯದಿಂದ್ರ ರಾಗಿ ಮಾಲ್ಟ್‌ವರೆಗೆ, ವೈದ್ಯದಿಂದ ವಿನೋಲಿಯಾ ಸೋಪಿನವರೆಗೆ, ಚರಿತ್ರೆ

ಯಿಂದ ಚಕ್ರಬಂಧ ಸ್ಪರ್ಧೆಯವರೆಗೆ, ಎಲ್ಲ ವಿಷಯಗಳೂ ಒಳವು. ಈಜಿಪ್ಟಿನಲ್ಲಿ ಹತ್ತಿಯ ಕಥೆ, ಬೇಲೂರಿನ ಶಿಲಾಬಾಲಿಕೆಯು ತನ್ನ ಸ್ನಾನಕ್ಕಾಗಿ ಉಪಯೋಗಿಸುತ್ತಿದ್ದ ಸುಗಂಧದ ಸಾಬೂನು, ಲೀಲಾದೇಸಾಯಿ ಚಪ್ಪಲಿ, ಇಂಗ್ಲೀಷರು ಹಾಕುವ ಟೋಪಿ, ನಾಸೀಮುಳ ಹಲ್ಲಿನ ಕಾಂತಿಯ ಗುಟ್ಟು-ಏನಿಲ್ಲ? ಏನು ಬೇಕು? ಎಲ್ಲ ಸಮಾಚಾರಗಳೂ ಅಲ್ಲಿಯೇ ಇವೆ. ಪ್ರಪಂಚದಲ್ಲಿ ಮುಕ್ಕಾಲು ನೀರು ಕಾಲು ಪಾಲು ಭೂಮಿ ಇರುವ ಹಾಗೆ ಪತ್ರಿಕಾ ಪ್ರಪಂಚದಲ್ಲಿ ಕಾಲುಪಾಲು ವಿಷಯವಾದರೆ ಮುಕ್ಕಾಲು ಪಾಲೆಲ್ಲ ಬರಿ ಪ್ರಕಟನೆಗಳೇ.

ಜಾಹಿರಾತುಗಳಿಗೆ ಸಂಬಂಧಿಸಿದಂತೆ ಒಂದು ಕತೆ ಇದೆ. ಸುಪ್ರಸಿದ್ಧ ಹಾಸ್ಯಗಾರನಾದ ಮಾರ್ಕ್ ಟ್ವೇನ್ ಒಂದು ವಾರ ಪತ್ರಿಕೆಯ ಸಂಪಾದಕನಾಗಿದ್ದಾಗ ಅವನಿಗೆ ಒಬ್ಬ ಶೆಟ್ಟಿಯಿಂದ ಒಂದು ಕಾಗದ ಬಂತು. ಆ ವಾರದ ಹೊಸ ಪತ್ರಿಕೆಯನ್ನು ತಗೆದು ನೋಡಿದಾಗ ಅದರ ಹಾಳೆಗಳ ಮಧ್ಯೆ ಒಂದು ಜೇಡರ ಹುಳು ಸತ್ತು ಬಿದ್ದಿತ್ತೆಂದೂ, ಅದರ ಶಕುನದ ಫಲವನ್ನು ತಿಳಿಯಲು ಆತುರನಾಗಿರುವೆನೆಂದು ಆ ಶೆಟ್ಟಿ ಬರೆದಿದ್ದನು. ಅದನ್ನು ನೋಡಿ ಮಾರ್ಕ್‌ಟ್ವೇನ್ ನಕ್ಕು ಉತ್ತರ ಬರೆದನಂತೆ "ಶ್ರೀಯುತರೇ! ನಮ್ಮ ಪತ್ರಿಕೆಯಲ್ಲಿ ಜೇಡರ ಹುಳುವಿನ ಕಳೇಬರವನ್ನು ಕಾಣುವುದರಿಂದ ಶುಭವೂ ಇಲ್ಲ, ಅಶುಭವೂ ಇಲ್ಲ. ಆ ಜೇಡ ನಮ್ಮ ಪತ್ರಿಕೆಯ ಜಾಹೀರಾತುಗಳನ್ನು ಓದುತ್ತಿತ್ತು. ನಿಮ್ಮ ಯಾವ ಜಾಹಿರಾತೂ ಪತ್ರಿಕೆಯಲ್ಲಿ ಇಲ್ಲದ್ದನ್ನು ಕಂಡು ಅದಕ್ಕೆ ಖುಷಿ ಆಗಿರಬೇಕು. ಏಕೆಂದರೆ ನಿಮ್ಮ ಅಂಗಡಿಗೆ ಗಿರಾಕಿಗಳು ಇಲ್ಲ ಎನ್ನುವುದು ಸ್ಪಷ್ಟವಾನೆ. ಪಾಪ ಬಡಜೇಡ. ನಿಮ್ಮ ಅಂಗಡಿಯ ಬಾಗಿಲಲ್ಲಿ ಬಲೆ ಕಟ್ಟಿಕೊಂಡು ಸೊಣ ಹೊಡೀತಾ ಇರಲಿ ಬಿಡಿ" ಎಂದು ಬರೆದನಂತೆ ಇದನ್ನು ಓದಿದ ಶೆಟ್ಟಿಯ ಅವಸ್ಥೆ ಏನಾಗಿರಬೇಕು!!

ಆದ್ದರಿಂದ ಇದು ಪ್ರಕಟನೆಗಳ ಯುಗ. ಅವು ಇನ್ನೂ ಹೆಚ್ಚಬೇಕು. ಕಾಲು ಪಾಲು ಭೂಮಿಯೂ ಇಲ್ಲದಂತಾಗಬೇಕು. ಆಗ ಜನ ಕಣ್ಣು ಮುಚ್ಚಿಕೊಂಡು ದಾರಿಯಲ್ಲಿ ನಡೆದರೂ ಸಹ, ಪತ್ರಿಕೆಗಳನ್ನು ಮಾತ್ರ ನಾಲ್ಕು ಕಣ್ಣುಗಳಿಂದ ಓದುತ್ತಾರೆ!

# ರಾಮಣ್ಣನ ಅದೃಷ್ಟ

ಅದೃಷ್ಟ ಚೆನ್ನಾಗಿದ್ದರೆ ಬಡವನೂ ಕೂಡ ಒಂದುಕಾಲದಲ್ಲಿ ಬಲ್ಲಿದನಾಗುತ್ತಾನಂತೆ. ಇದನ್ನು ನಾವು ಬಹುಮಂದಿ ನಂಬದಿದ್ದರೂ ರಾಮಣ್ಣ ಮಾತ್ರ ಚೆನ್ನಾಗಿ ಭದ್ರವಾಗಿ ನಂಬಿದ್ದ. ಅದರ ಸತ್ಯಾಸತ್ಯತೆಗೆ ಅವನ ಜೀವನವೇ ದೊಡ್ಡ ಸಾಕ್ಷಿಯಾಗಿತ್ತು. ಎದೆ ಸೀಳಿದರೆ ಎರಡು ಅಕ್ಷರ ಇಲ್ಲದ ಮುಟ್ಠಾಳನಿಗೆ ಕೆಲಸ ಯಾರು ಕೊಡುತ್ತಾರೆ ಎಂದು ಅವರ ಅಪ್ಪ ಹಂಗಿಸುತ್ತಿದ್ದರು. ಆದರೂ ರಾಮಣ್ಣ ಹಿಂದೆಯೆ ಆರು ರೂಪಾಯಿನ ಚಾಕರಿ ಗಿಟ್ಟಿಸಿಬಿಟ್ಟ. ಈ ಮೂದೇವಿ ಮುಖ ನೋಡಿ ಯಾವ ತಂದೆ ಹೆಣ್ಣು ಕೊಡುತ್ತಾನೆ ಎಂದರು. ಆದರೂ ರಾಮಣ್ಣನಿಗೆ ಮದುವೆ ಆಗಿಯೇ ಬಿಟ್ಟಿತು. ಸಂಸಾರದ ಮರಕ್ಕೆ ನೀರೆರೆದದ್ದೇ ತಡ ಪಾರಿಜಾತದ ಹೂವಿನಂತೆ ಮನೆತುಂಬ ಮಕ್ಕಳುಮರಿ. ಜನ ಏನೇನು ಅವನ ಪಾಲಿಗೆ ಇಲ್ಲ ಅಂದರೋ ಅದೆಲ್ಲಾ ರಾಮಣ್ಣನಿಗೆ ಅದೃಷ್ಟ ವಶಾತ್ ಸಿಕ್ಕೇಬಿಟ್ಟವು. 'ಹುಟ್ಟಿಸಿದ ದೇವರು ಹುಲ್ಲನ್ನಾದರೂ ಮೇಯಿಸುತ್ತಾನೆ' ಎಂದು ಅವನು ದೃಢವಾಗಿ ನಂಬಿದ್ದರಿಂದ ಚಾಕರಿಗೆ ಸೇರಿದ ಹತ್ತುವರ್ಷದಲ್ಲಿ, ಮನೆಯಲ್ಲಿ ಒಂದೊಂದು ಪಾರಿಜಾತ ಹೆಚ್ಚುತ್ತಿದ್ದಂತೆಲ್ಲಾ ರಾಮಣ್ಣನಿಗೆ ಒಂದೊಂದು ರೂಪಾಯಿ ಬಡ್ತಿ ಸಿಕ್ಕುಬಿಟ್ಟಿತು. ಪ್ರಪಂಚದಲ್ಲಿ ಯುದ್ಧ ಬಂತು, ಬರಬಂತು, ಮತ್ತೆ ಒಂದು ಯುದ್ಧ ಬಂತು. ಯಾವುದಕ್ಕೂ ರಾಮಣ್ಣನ ರಥ ಜಗ್ಗಲಿಲ್ಲ. ಹರಿದಾರಿ, ಹರಿದಾರಿ, ಹರಿದಾರಿ ಮುಂದೆ ಎಂದು ಅದು ಸಾಗುತ್ತಲೇ ಇತ್ತು. ಪಿಂಚನಿ ಆಗುವ ಹೊತ್ತಿಗೆ ರಾಮಣ್ಣ ಒಂದು ಘಟ್ಟವನ್ನು ಮುಟ್ಟಿದ್ದ ಎನ್ನಬಹುದು. ಮನೆಯಲ್ಲಿ ಹಿರೇಮಗ ಮತ್ತು ಇಬ್ಬರು ಹೆಣ್ಣುಮಕ್ಕಳಿಗೆ ಮದುವೆ ಆಗಬೇಕಿತ್ತು. ಕಿರಿಯ

ಮಕ್ಕಳ ಪೈಕಿ ಮೂವರಿಗೆ ಉಪನಯನ ಆಗಬೇಕಿತ್ತು. ಒಬ್ಬನಿಗೆ ಚೌಲ ಆಗುವುದಿತ್ತು. ಇನ್ನೊಂದು ಕೈಕೂಸಿಗೆ ಅನ್ನಪ್ರಾಶನ ಆಗುವುದಿತ್ತು. ಇಷ್ಟೆಲ್ಲಾ ಸಮಾರಂಭಗಳು ಒಟ್ಟಿಗೆ ಬಂದರೆ ಯಾರಿಗಾದರೂ ಎದೆ ಝಲ್ ಎನ್ನದೆ ಇರದು. ದಿನಪೂರ್ತಿಯ ಸಂಸಾರವನ್ನು ಹೇಗಾದರೂ ನಡೆಸ ಬಹುದು. ಆದರೆ ಮೇಲಿನ ಖರ್ಚಿಗೆ ಹಣವೆಲ್ಲಿಂದ ಬರಬೇಕು ?

"ಏನು ರಾಮಣ್ಣ ಖರ್ಚಿನ ಬಾಬ್ತು ಎಲ್ಲಾ ಇದೆಯಲ್ಲ. ಮಕ್ಕಳ ಮದುವೆ ಮುಂಜಿ ಹೇಗೆ ಮಾಡ್ತೀಯಾ ?" ಎಂದು ಯಾರಾದರೂ ಕೇಳಿದರೆ ರಾಮಣ್ಣ "ಅಯ್ಯೋ ಅದಕ್ಕೇನು ಸ್ವಾಮಿ. ದೇವರಿದ್ದಾನೆ" ಎಂದುಬಿಡುತ್ತಿದ್ದ. ಅವನ ವಿಚಾರದಲ್ಲಿ ಇತರರಿಗಿದ್ದ ಪರಿತಾಪ ಅವನಿಗೇ ಇರಲಿಲ್ಲ. ನೌಕರಿಯಲ್ಲಿ ಇರುವಷ್ಟು ದಿನವೂ ಏನಾದರೊಂದು ಉಪಾಯ ಹುಡುಕಿ ಅವನು ಕಾಗೆಯ ಬಾಯ ಮಾಂಸವನ್ನು ಕಸಿದುಬಿಡುತ್ತಿದ್ದ. ಆದರೆ ಈಗ ರಿಟೈರ್ ಆಗಿದೆ. ಬರುವ ಸಂಬಳದಲ್ಲಿ ಅರ್ಧಕ್ಕೆ ಹೋಯಿತಾ. ಬರುವ ಅರ್ಧ ಸಂಬಳದಲ್ಲಿ ಜೀವನ ಸಾಗಬೇಕು. ಇದಕ್ಕೆ ತಕ್ಕಂತೆ ಮನೆಯ ಖರ್ಚಾದರೂ ಅರ್ಧ ಕಡಿಮೆ ಯಾಗುವುದೇನು ಇರಲಿಲ್ಲ. ಹಿಂದಿನ ಚಟಗಳು—ಒಂದು ನಶ್ಯ, ಒಂದು ಅರ್ಧ ಕಾಫಿ-ಇವೆಲ್ಲ ಆಗಿಯೇ ತೀರ ಬೇಕು. ಇವನ್ನೆಲ್ಲ ನೆನೆಸಿಕೊಂಡರೆ ಹೇಗಪ್ಪಾ ಗತಿ ಎಂಬ ಸಂದೇಹ ಮೂಡದೆ ಇರದು.

ರಾಮಣ್ಣ ಅದಕ್ಕೆ ಒಂದು ಅದೃಷ್ಟದ ಉಪಾಯ ಹುಡುಕದೇ ಇರ ಲಿಲ್ಲ. ಅವನು ಚಾಕರಿಗೆ ಸೇರಿದಾಗ ಅವನಿಗೆ ಎಲ್. ಎಸ್. ಆಗತ್ತು ಅಷ್ಟೆ. ಅಂದಮೇಲೆ ಅವನ ಇಂಗ್ಲೀಷ್ ಜ್ಞಾನ ಎಷ್ಟಿತ್ತು ಎಂದು ಹೇಳ ಬೇಕಾಗಿಲ್ಲ. ಅವನು ಬರೆದ ಇಂಗ್ಲೀಷನ್ನ ಸಾಹೇಬರು ಒಂದು ಸಲ ದೂರ ದಿಂದ ನೋಡಿ 'ಇದೇನ್ರಿ ಕನ್ನಡದಲ್ಲಿ ಬರೆದಿದ್ದೀರಿ' ಎಂದರಂತೆ. ರಾಮಣ್ಣ ಬರೆದರೆ ಇಂಗ್ಲೀಷು ಕನ್ನಡವಾಗುತ್ತಿತ್ತು, ಕನ್ನಡ ಅಧ್ವಾನವಾಗುತ್ತಿತ್ತು. ಗುಮಾಸ್ತೆಯ ಭಾಷಾಪಾಂಡಿತ್ಯವನ್ನು ನೋಡಿ ಸಾಹೇಬರು ಒಂದುಸಲ "ರಾಮಣ್ಣ ನೀನು ಸ್ವಲ್ಪ ಇಂಗ್ಲೀಷ್ ನಾವೆಲ್ಸು ಓದಬೇಕು. ಸ್ವಲ್ಪ ಇಂಗ್ಲೀಷ್ ಇಂಪ್ರೂವ್ ಮಾಡಿಕೊಳ್ಳಬೇಕು. ನನ್ನ ಮನೆಗೆ ಬಾ. ಪುಸ್ತಕ ಬೇಕಾದರೆ ಕೊಡತೀನಿ" ಎಂದರಂತೆ. ಸಾಹೇಬರ ಮಾತಿಗೆ

ಬಿಲಿಕೊಟ್ಟು ರಾಮಣ್ಣ ಬಹು ಉತ್ಸಾಹದಿಂದ ರೇನಾಲ್ಡ್ಸ್ ನಾವೆಲ್ಲು ಗಳನ್ನು ತಂದು ಭೂತಗನ್ನಡಿಯ ಕನ್ನಡಕ ಹಾಕಿಕೊಂಡು ರಾತ್ರಿ ದೀಪ ಉರಿಸಿ ಓದಿ ಮುಗಿಸುತ್ತ ಬಂದ. ಲಂಡನ್ ಕೋರ್ಟಿನ ಮಿಸ್ಟರಿಗಳನ್ನು, ಹೇರವಿನ್ಸ್ನ ಪ್ರಣಯ ಚಿತ್ರಗಳನ್ನು ಓದುತ್ತಿದ್ದಂತೆ ರಾಮಣ್ಣನಿಗೆ ಒಂದು ಆತ್ಮಸ್ಫೂರ್ತಿ ಬಂತು. ಆಫೀಸಿನಲ್ಲಿ ಹೊಸದಾಗಿ ಬಂದ ಗ್ರ್ಯಾಜುಯೇಟು ಗಳನ್ನು ಮೂದಲಿಸುವಾಗ "ಈಗಿನ ಕಾಲದ ಗ್ರ್ಯಾಜುಯೇಟುಗಳು ಏನೂಂತೀರಿ. ದಂಡ. ಆಫೀಸ್ ಕೆಲಸ ಎಳ್ಳಷ್ಟು ಬರೋದಿಲ್ಲ. ನಮ್ಮ ಹಾಗೆ ಕರಾರುವಾಕ ಚಟ ಪಟ ಕೆಲಸ ಮಾಡಲಿ ನೋಡೋಣ" ಎಂದು ಹೇಳಲು ಮೊದಲು ಮಾಡಿದ.

ರಾಮಣ್ಣ ಕಲಿತ ಇಂಗ್ಲೀಷು ಆತನು ರಿಟೈರ್ ಆದ ಮೇಲೂ ಉಪ ಯೋಗಕ್ಕೆ ಬಂತು. ಪಿಂಚನಿ ಆದ ರಾಮಣ್ಣ ಕಾಲಕ್ಷೇಪಕ್ಕಾಗಿ ರೀಡಿಂಗ್ ರೂಮಿಗೆ ಹೋಗಿ ಪ್ರತಿಯೊಂದು ಪೇಪರಿನ ಹೆಸರು ದೆಸೆ, ಸುದ್ದಿ ಸಮಾ ಚಾರ ಅದು ಅಚ್ಚಾದ ಸ್ಥಳ ಎಲ್ಲವನ್ನೂ ಓದುತ್ತಿರುವಾಗ ಒಂದು ಇಂಗ್ಲೀಷ್ ಪತ್ರಿಕೆಯಲ್ಲಿ "ಬಹುಮಾನ ಒಂದು ಲಕ್ಷದ ಎಪ್ಪತ್ತೈದು ಸಾವಿರ ರೂಪಾಯಿಗಳು" ಎಂದು ಬರೆದಿತ್ತು. ರಾಮಣ್ಣ ಹೌಹಾರಿದ. ಅದನ್ನೆಲ್ಲಾ ಓದಿ ನೋಡಿದ. ನೋಡಿದ್ದೇ ತಡ ಫುಟ್‌ಬಾಲ್ ಪೂಲ್ಸ್ ಮತ್ತು ಕಾಮನ್‌ಸೆನ್ಸ್ ಕ್ರಾಸ್‌ವರ್ಡ್ಸ್‌ಗೆ ಕಾಯಂ ಗಿರಾಕಿಯಾಗಿಬಿಟ್ಟ. ಹೋದರೆ ಒಂದು ರೂಪಾಯಿ. ಅಷ್ಟೆ. ಬಂದರೆ, ಅದೃಷ್ಟ ಚೆನ್ನಾಗಿದ್ದು ಬಂದರೆ ಹದಿನೈದು, ಇಪ್ಪತ್ತು ಸಾವಿರದ ಗಂಟು ಬರುತ್ತಲ್ಲ. ಅಕಸ್ಮಾತ್ ಬಂದುಬಿಟ್ಟರೆ ಮದುವೆ ಮುಂಜಿ ಎಲ್ಲಾ ಕಾರ್ಯಗಳೂ ನಿರ್ವಿಘ್ನವಾಗಿ ನಡೆದು ಹೋಗುತ್ತವೆ. ಎಂದೆಲ್ಲಾ ಅವನು ಗುಣಾಕಾರ ಹಾಕಿದ. ಹಗಲು ರಾತ್ರಿ ಛೇಂಬರ್ಸ್ ಡಿಕ್ಷನರಿ ಹಿಡಿದುಕೊಂಡು ಪದಗಳಿಗೆ ಅರ್ಥ ನೋಡಲು ಪ್ರಾರಂಭಿಸಿದ. ಈ ಹುಚ್ಚು ಪ್ರಾರಂಭವಾದಮೇಲೆ ರಾಮಣ್ಣ ನಲ್ಲಿ ಹೊಸದೊಂದು ಘೋರಣೆ ತೋರಹತ್ತಿತು. ಮಾತೆತ್ತಿದರೆ, ಸ್ವಲ್ಪ ಕಾಮನ್ ಸೆನ್ಸ್ ಬೇಕು ಸಾರ್, ಸಂಸಾರ ಅನ್ನೋದು ನ್ಯಾಷ್ಟಿನೋ ಟೇಸ್ಟಿನೋ ಹೇಳಿ; ನಿಮಗೆ ಏನು ಬೇಕು ಮಸಿನೋ ಹಸಿನೋ? ಎಂದು ಒಗಟೆಯಂತೆ ಬಾಯಿ ಬಿಡುತ್ತಿದ್ದ. ಒಂದು ಉತ್ತರ ಕಳಿಸೋದು,

ಒಂದಕ್ಕಾಗಿ ಕಾಯೋದು, ಕಾದು ಬಂದ ಉತ್ತರವನ್ನು ಸರಿಯೋ ತಪ್ಪೋ ನೋಡೋದು. ಐದು ಆರು ತಪ್ಪಾಗಿರುವುದನ್ನು ಕಂಡು ಮತ್ತೆ ಮರಳಿ ಯತ್ನವನ್ನು ಮಾಡೋದು. ಇದು ಗುಮಾಸ್ತೆ ರಾಮಣ್ಣನ ಉತ್ತರ ಕಾಂಡದ ಕಥೆಯಾಗಿಬಿಟ್ಟಿತು.

ಬಹುಶಃ ಕಾ ಮ ನ್ ಸೆ ನ್ಸ್ ಹೆಚ್ಚಾದುದರಿಂದಲೋ ಏನೋ ರಾಮಣ್ಣ ಬರಬರುತ್ತ, ಹುಚ್ಚನಾಗುತ್ತ ಬಂದ, ಕಣ್ಣು ಗುಣಿಬಿದ್ದು ಕೈಕಾಲಿನ ಶಕ್ತಿ ಉಡುಗಿ ಒಂದು ದಿನ ಹಾಸಿಗೆ ಹಿಡಿದೇಬಿಟ್ಟ. ಕಾಹಿಲೆ ಬಿದ್ದಿದ್ದರೂ ಕೂಡ ರಾಮಣ್ಣ ತಲೆಯ ಹತ್ತಿರ ದೂರದಲ್ಲಿ ಡಿಕ್ಷನರಿ ಇರಿಸಿ ಕೊಂಡೇ ಇದ್ದ. ಎಚ್ಚರವಾದಾಗಲೆಲ್ಲ ಉತ್ತರ ಬಂತೇನೇ, ಪೋಸ್ಟ್ ಮ್ಯಾನ್ ಬಂದನಾ ಎಂದು ಹೆಂಡತಿಯನ್ನು ಕೇಳುತ್ತಿದ್ದ.

ಮನೆಯ ಯಜಮಾನನಿಗೆ ಕಾಹಿಲೆ ಆಗಿರುವಾಗ ಹೆಂಡತಿ ಮಕ್ಕಳು ಸುಮ್ಮನೆ ಇರುತ್ತಾರೆಯೇ! ಹೋಗಿ ಡಾಕ್ಟರೊಬ್ಬರನ್ನು ಕರೆತಂದು ಪರೀಕ್ಷೆ ಮಾಡಿಸಿದರು. ಆ ಅಳಲೇಕಾಯಿ ಪಂಡಿತರು ರೋಗಿಯನ್ನು ಚೆನ್ನಾಗಿ ಪರೀಕ್ಷೆಮಾಡಿ ಮೂರು ಗುಟುಕು ಔಷಧಿ ಕುಡಿಸಿ, "ರಾಯರಿಗೆ ಬಹಳ ದಣಿವಾಗಿದೆ. ಕೆಲಸ ಜೋರು ಎಂತ ಕಾಣುತ್ತದೆ. ಸ್ವಲ್ಪ ವಿರಾಮ ಆವಶ್ಯಕ, ಅವರಿಗೆ ಪೇಪರು, ಪೋಸ್ಟ್ ಕಾಗದ, ಡಿಕ್ಷನರಿ ಏನನ್ನೂ ಕೊಡ ಬೇಡಿ." ಎಂದು ರಾಯರ ಕುಟುಂಬಕ್ಕೆ ಎಚ್ಚರಿಗೆ ಕೊಟ್ಟು ಹೋದರು. ಹೋದವರು ದಿನಾ ಔಷಧಿ ಕಳುಹಿಸುತ್ತಿದ್ದರೇ ಹೊರತು ರೋಗಿಯನ್ನು ನೋಡಲು ಬರಲಿಲ್ಲ. ಇಲ್ಲಿ ರಾಮಣ್ಣ ಔಷಧಿ ಕುಡಿಯೋದು, 'ಪೋಸ್ಟ್ ಬಂತೇ' ಎನ್ನೋದು. ಮಲಗಿ ಏಳುವುದು "ಎಲ್ಲಿ ಆ ಪೇಪರ್ ಕೊಡು" ಎನ್ನುವುದು—ಹೀಗೆ ಮೊಂಡಾಟಕ್ಕೆ ಶುರುಮಾಡಿದ. ಹೆಂಡತಿಗೆ ತಡೆದು ತಡೆದು ಸುಸ್ತಾಗಿಹೋಯಿತು. ಇವರು ಹೀಗೆ ತಳ ತಳ ಅಂದರೆ ಮತ್ತೆ ಕಷ್ಟವಾದೀತು ಎಂದು ಆಕೆ ಡಾಕ್ಟರಿಗೆ ಜರೂರು ಬರುವಂತೆ ಹೇಳಿ ಕಳುಹಿಸಿದಳು.

ಡಾಕ್ಟರು ಮನೆಗೆ ಬಂದಕೂಡಲೇ ಅವರನ್ನು ಸುಮ್ಮನಿರಹೇಳಿ ಒಂದು ವಾರದಿಂದ ಒಡೆಯದೆ ಹಾಗೆಯೇ ಇಟ್ಟಿದ್ದ ಕಾಗದ ಕವರುಗಳನ್ನೆಲ್ಲಾ ಅವರ ಮುಂದೆ ಹಾಕಿ "ನೋಡಿ ಡಾಕ್ಟ್ರೇ ಇಷ್ಟು ಪತ್ರ ಬಂದಿದೆ.

ಅವರಿಗೆ ಏನನ್ನೂ ಕೊಟ್ಟಿಲ್ಲ. ಸ್ವಲ್ಪನೋಡಿ. ಏನಿದೆಯೋ" ಎಂದು ಪಿಸುಮಾತಿನಲ್ಲಿ ಹೇಳಿದಳು, ಮನೆಯ ಯಜಮಾನಿ.

ಡಾಕ್ಟರು ಕಣ್ಣಿಗೆ ಕನ್ನಡಕ ಏರಿಸಿ, ಗಂಭೀರವಾಗಿ ಒಂದೊಂದೇ ಪೇಪರನ್ನು ತೆಗೆದು ನೋಡುತ್ತಾ, "ಎಲ್ಲಾ ಬರೀ ಕ್ರಾಸ್‌ವರ್ಡ್ ಪೇಪರ್ ಗಳೇ ಇವೆಯಲ್ಲ" ಎಂದು ರಾಗ ತೆಗೆದರು. ಬೊಂಬಾಯಿನಿಂದ ಬಂದ ಒಂದು ಕವರನ್ನು ಒಡೆದು ಓದಿದರು. ಆಶ್ಚರ್ಯದಿಂದ ರಾಮಣ್ಣನ ಹೆಂಡತಿಯ ಮುಖ ನೋಡಿದರು. "ತಾಯಿ ನಿಮಗೊಂದು ಸಂತೋಷದ ಸುದ್ದಿ ಇದೆ. ನೋಡಿ. ನಿಮ್ಮ ಯಜಮಾನರಿಗೆ ಹದಿಮೂರು ಸಾವಿರ ರೂಪಾಯಿ ಮೊದಲ ಬಹುಮಾನ ಬಂದಿದೆ" ಎಂದರು. ಆ ಮಾತನ್ನು ಕೇಳಿ ಆ ಹೆಣ್ಣುಮಗಳು—ಎಷ್ಟು ಸಂತೋಷವಾಯಿತೋ ಏನೋ-- ಸಂಭ್ರಮದಿಂದ "ತಡೀರಿ ಡಾಕ್ಟರೇ ಅವರಿಗೆ ಹೇಳಿಬರುತ್ತೇನೆ" ಎಂದು ಹೊರಟಳು.

ಡಾಕ್ಟರು ಠಣ್ ಎಂದು ನೆಗೆದು ಹಾರಿ ಆಕೆಯನ್ನು ಅಡ್ಡಗಟ್ಟಿ, "ಅಲ್ಲಮ್ಮ ಯಜಮಾನರಿಗೆ ಬಹಳ ಕಾಹಿಲೆಯಾಗಿದೆ, ಬುದ್ಧಿ ದುರ್ಬಲ ವಾಗಿದೆ. ಅಂಥಾ ಸಮಯದಲ್ಲಿ ನೀವು ಏಕಾಏಕಿ ಇದನ್ನು ಹೇಳಿದರೆ ಆತ ಎದೆ ಒಡೆದು ಪ್ರಾಣ ಬಿಟ್ಟಾರು. ಸ್ವಲ್ಪ ತಡೀರಿ ನಾನು ನಿಧಾನವಾಗಿ ಹೇಳುತೇನೆ" ಎಂದರು.

ಹೆಂಡತಿ ಆಗ 'ಹೌದು ಹೌದು, ಡಾಕ್ಟ್ರೇ' ಎಂದು ನಿಂತಲ್ಲಿಯೇ ನಿಂತಳು.

ಪಂಡಿತರು ರೋಗಿಯಿದ್ದ ಕೋಣೆಗೆ ಹೋಗಿ ಮಾತನಾಡಿಸಿ, ಔಷಧಿ ಕುಡಿಸಿ, ನಾಡಿ ಹಿಡಿದು ಅಲುಗಾಡಿಸಿ, ಎದೆ ಬಡಿದು, ಕಣ್ಣು ಅಗಲಿಸಿ ನೋಡಿ, ತಲೆಯಲ್ಲಿ ಕೈ ಇಟ್ಟು "ಪರವಾಗಿಲ್ಲ ರಾಮಣ್ಣೋರೆ ಜ್ವರ ಇಳಿದಿದೆ. ಹುಷಾರಾಗುತ್ತಿದ್ದೀರಿ ಎಂದು ಮಾತಿಗೆ ಮೊದಲು ಮಾಡಿದರು.

ಅದಕ್ಕೆ ರಾಮಣ್ಣ "ಜ್ವರಗಿರ ಎಲ್ಲ ಇಳಿದಿದೆ ಸ್ವಾಮಿ. ಬೇಜಾರಾಗುತ್ತೆ ಏನಾದರೂ ಓದೋಣ ಅಂದ್ರೆ ಇವಳು ಪೇಪರ್‌ಸಹ ಕೊಡೋಲ್ಲ ನೋಡಿ" ಎಂದು ನರಳಾಡಿದ.

ಆಗ ಡಾಕ್ಟರು "ರಾಮಣ್ಣೋರೆ ಕ್ರಾಸ್‌ವರ್ಡ್ ಅಂದರೆ ನಿಮಗೆ ತುಂಬಾ ಇಷ್ಟ ಅಂತ ಕಾಣುತ್ತೆ" ಎಂದರು.

"ಹೌದು ಸ್ವಾಮಿ ರಿಟೈರ್ ಆದಮೇಲೆ ಎಂಟು ವರ್ಷದಿಂದ ಈ ಪ್ರಾಣಿಗೆ ಆ ಹುಚ್ಚು ಹಿಡಿದಿದೆ" ಎಂದ ರಾಮಣ್ಣ.

ಡಾಕ್ಟರು "ಸ್ವಾಮಿ, ಬರೀ ಅದಕ್ಕಾಗಿ ಹಣ ಕಳಕೋತಾ ಇದೀರೋ ಇಲ್ಲಾ ಏನಾದರೂ ಪ್ರೈಸ್ ಗಿಟ್ಟಿಸಿದ್ದೀರೋ" ಎಂದರು.

ಆ ಮಾತು ಕೇಳುತ್ತಲೆ ರಾಮಣ್ಣ ಸ್ವಲ್ಪ ಹಾಸಿಗೆಯಿಂದ ಎದ್ದು "ಏನು ಬಹುಮಾನ ಸ್ವಾಮಿ, ನಾಲ್ಕು, ಹತ್ತು, ಐವತ್ತು ಅಂತ ಅಲ್ಪ ಸ್ವಲ್ಪ ಬಂದಿದೆ ಅಷ್ಟೆ ಹೊರತು ಫಸ್ಟ್‌ಪ್ರೈಸ್ ಇನ್ನೂ ದಕ್ಕಿಲ್ಲ. ಆಗಲಿ ದೇವರಿದ್ದಾನೆ" ಎಂದು ಭಾವ ಪೂರಿತವಾಗಿ ನುಡಿದ.

ಇದಕ್ಕಾಗಿ ಕಾದಿದ್ದ ಡಾಕ್ಟರು "ಮಸಲಾ ರಾಮಣ್ಣೋರೆ ನಿಮಗೆ ಮೊದಲನೆ ಬಹುಮಾನ ಹದಿಮೂರು ಸಾವಿರ ರೂಪಾಯಿ ಬಂದುಬಿಟ್ಟರೆ ಏನು ಮಾಡುತ್ತೀರಿ?" ಎಂಬ ಪ್ರಶ್ನೆಯನ್ನು ಕೇಳಿಬಿಟ್ಟರು.

ಏಳುತ್ತಿದ್ದ ರಾಮಣ್ಣ ಮತ್ತೆ ಮಲಗುತ್ತ "ಅಯ್ಯೋ ನಮಗೆಲ್ಲ ಎಲ್ಲಿ ಬರುತ್ತೆ ಅಂದ್ರೆ ಡಾಕ್ಟ್ರೇ. ಒಂದು ವೇಳೆ ಬಂತು ಅನ್ನಿ—ದೇವರ ಆಣೆಗೂ ಹೇಳ್ತೀನೆ, ಹಾಗೇನಾದ್ರೂ ಬಂದ್ರೆ–ಅದರಲ್ಲಿ ಅರ್ಧ ನಿಮಗೆ ಕೊಟ್ಟುಬಿಡುತ್ತೀನೆ" ಎಂದ.

ಆ ಉತ್ತರ ರಾಮಣ್ಣನ ಬಾಯಿಂದ ಬಂದದ್ದೇ ತಡ ಡಾಕ್ಟರ್ ಎಗರಿಬಿಟ್ಟರು. ಕಣ್ಣು ಕತ್ತಲಾದಂತಾಗಿ ಕೆಳಗೆ ಬಿದ್ದರು. ಬಿದ್ದವರು ಏಳಲೇ ಇಲ್ಲ!!



# ಉತ್ತರ ಪತ್ರಿಕೆ

ಪ್ರಿಯ ಸಂಪಾದಕರೆ,

[ಕಳೆದ ನಗುವನಂದ ಸಂಚಿಕೆಯಲ್ಲಿ ಪ್ರಕಟವಾಗಿರುವ ಪ್ರಶ್ನೆ ಪತ್ರಿಕೆಯನ್ನು ಓದಿ ನೋಡಿದೆ. ಕೊಟ್ಟಿರುವ ಏಳು ಪ್ರಶ್ನೆಗಳಲ್ಲಿ ಕೇವಲ ಐದಕ್ಕೆ ಮಾತ್ರ ಉತ್ತರ ಬರೆಯಬೇಕಾಗಿ ಕೇಳಿದ್ದೀರಿ. ಕೊಟ್ಟಿರುವ ಕಾಲ ಮೂರು ಗಂಟೆ.

ನಾನು ಪ್ರಸ್ತುತ ಐದು ಪ್ರಶ್ನೆಗಳನ್ನು ಆಯ್ದುಕೊಂಡು ಅವುಗಳ ಉತ್ತರವನ್ನು ಒಂದೇ ಪ್ರಬಂಧದಲ್ಲಿ ಬರೆದು ಕಳುಹಿಸಿದ್ದೇನೆ—ತಾವು ವಿರಾಮವಿದ್ದಲ್ಲಿ ನನ್ನ ಉತ್ತರ ಪತ್ರಿಕೆಯನ್ನು ಓದಿ ನಂಬರ್ ಕೊಟ್ಟು ನಾನು ಪ್ಯಾಸೋ ಫೈಲೋ ತಿಳಿಸುತ್ತೀರಾ? ಒಂದುವೇಳೆ ಪರೀಕ್ಷೆಯಲ್ಲಿ ನಾನು ತೇರ್ಗಡೆಯಾದರೆ ಯಾವ ಕೆಲಸವನ್ನು ಕೊಡುತ್ತೀರಿ? ಅಥವಾ ನಾನು ತೇರ್ಗಡೆಯಾಗಬೇಕಾದರೆ ಏನಾದರೂ ಲಂಚ ಕೊಡಬೇಕಾದ ಅಗತ್ಯ ವಿದೆಯೋ?]

ಲಂಚ ಎಂದರೇನು ಎಂಬ ಪ್ರಶ್ನೆಗೆ ಉತ್ತರ ಕೊಡುವುದು ಕೊಂಚ ಕಷ್ಟ. ಲಂಚ ಎಂದರೆ ಮಂಚವಲ್ಲ, ಕುಂಚವಲ್ಲ, ಕ್ರೌಂಚವಲ್ಲ! ಏಕೆಂದರೆ ಮಂಚದಂತೆ ಲಂಚಕ್ಕೆ ಕಾಲಿಲ್ಲ, ಕುಂಚದಂತೆ ನಾಲಿಗೆ ಇಲ್ಲ. ಕ್ರೌಂಚ ದಂತೆ ನುಡಿ ಇಲ್ಲ. ಲಂಚ ಎಂದರೆ ಬೇರೆ ಏನೂ ಅಲ್ಲ, ಲಂಚ ಎಂದೇ ಅರ್ಥ.

ಲಂಚ ಮೂಲತಃ ಒಂದೇ ಅರ್ಥವೆಂದ ಕೂಡಿದ್ದರೂ ಬಾಹ್ಯವಾಗಿ ಅದು ಬಹು ರೂಪದಿಂದ ಕಂಗೊಳಿಸುತ್ತಿದೆ. ಲಂಚ ಕೇವಲ ಹಣದ ರೂಪವಾಗಿ ಮಾತ್ರ ಇರುತ್ತೆಂಬುದು ಸುಳ್ಳು.

ಉದಾಹರಣೆಗೆ ನಮ್ಮ ನಮ್ಮ ಮನೆಯನ್ನೇ ತೆಗೆದುಕೊಳ್ಳಬಹುದು (ಇಲ್ಲಿ ಮನೆ ಎಂದರೆ ಹೆಂಡತಿ ಮಕ್ಕಳು ಎಂದು ಅರ್ಥ, ನಾವಿರುವ ಬಾಡಿಗೆ ಮನೆಯಲ್ಲ) ಹೆಂಡತಿಯಾದವಳು ತನ್ನ ಕಾರ್ಯಸಾಧನೆ ಯಾಗುವುದಕ್ಕಾಗಿ ಗಂಡನಿಗೆ ಲಂಚ ಕೊಡುವುದು ವಾಡಿಕೆ. ಅದು ಕೇವಲ ಅರ್ಥ ಕಾಫಿಯಲ್ಲಿ ಕೊನೆಗೊಂಡರೂ ಕೊನೆಗಾಣಬಹುದು, ಇಲ್ಲವೇ "ಮಾರಾಮಾರಿ" ಆಗಬಹುದು. ಇದರಿಂದ ಹೆಂಡತಿಗೆ ನಷ್ಟವಿಲ್ಲ. ಗಂಡನಿಗಾಗುವ ಲಾಭ ಅಷ್ಟರಲ್ಲೇಇದೆ ಆದರೆ ಹೆಂಡತಿಯ ಕೆಲಸ ಮಾತ್ರ ಬಹುಬೇಗ ಆಗಿಹೋಗುತ್ತದೆ.

ನೀವು ಅಂಗಡಿಗೆ ಸಾಮಾನಿಗಾಗಿ ಹೋಗುತ್ತೀರಿ. ನಿಂತಿರುತ್ತದೆ ನರಕಸದೃಶವಾದ ಕ್ಯೂ. ಅದರ ಹಿಂದೆ ನಿಂತು ನೀವು ನಿಮ್ಮ ಸರದಿಯನ್ನು ಕಾಣಬೇಕಾದರೆ ರಾಮ ಹುಟ್ಟಿ ರಾವಣನ ಸಂಹಾರವಾಗಬೇಕು. ಅಂಥಾ ಸಮಯದಲ್ಲಿ ನೀವು ನಿಮ್ಮ ಪ್ರತಿಷ್ಟೆಯನ್ನು ಲಂಚವನ್ನಾಗಿ ಉಪಯೋಗಿಸಿ ಕಾರ್ಯವನ್ನು ಬೇಗ ಸಾಧಿಸಿಕೊಳ್ಳಬಹುದು.

ಆಫೀಸುಗಳಲ್ಲಿ ನಮಸ್ಕಾರದಿಂದ ಪ್ರಾರಂಭವಾಗುತ್ತದೆ ಲಂಚ! ಅಲ್ಲಿಂದ ಬರೀ ಕಾಫಿ, ತಿಂಡಿ, ಸಿಗರೇಟ್ ಪ್ಯಾಕು ಇವುಗಳ ರೂಪವನ್ನು ತಾಳುತ್ತದೆ. ಜವಾನನಿಂದ ಜನಾರ್ದನನವರೆಗೆ ಯಾರು ಬೇಕಾದರೂ ಲಂಚವನ್ನು ತೆಗೆದುಕೊಳ್ಳಬಹುದು, (ಕೊಡುವವನಿದ್ದರೆ) ಆದ್ದರಿಂದ ಯೋಗ್ಯತೆಗೆ ತಕ್ಕಂತೆ–ಎಂದರೆ ಕೊಡುವವನ ಮತ್ತು ತೆಗೆದುಕೊಳ್ಳುವನ ಯೋಗ್ಯತೆಗೆ ತಕ್ಕಂತೆ–ಲಂಚ ತನ್ನ ರೂಪವನ್ನು ಬದಲಾಯಿಸಿಕೊಳ್ಳುತ್ತದೆ. ಹಣ್ಣಿನ ತಟ್ಟೆಯಾಗಿ, ಬೆಣ್ಣೆಯ ಮುದ್ದೆಯಾಗಿ, ರೇಷ್ಮೆ ಸೂತ್ರವಾಗಿ, ಫಿನ್ಲೇಧೋತ್ರವಾಗಿ, ಅಕ್ಕರೆಯಾಗಿ, ಸಿಹಿ ಸಕ್ಕರೆಯಾಗಿ ಲಂಚ ಕಾಣಿಸಿಕೊಳ್ಳುತ್ತದೆ.

ಲಂಚ ತೆಗೆದುಕೊಳ್ಳುವವರ ಅರ್ಹತೆ ಮತ್ತು ಅನರ್ಹತೆಯ ವಿಚಾರ. ಆಫೀಸುಗಳಲ್ಲಾದರೆ ಸಣ್ಣ ಪುಟ್ಟ ನೌಕರರೆಲ್ಲ ಲಂಚ ತೆಗೆದುಕೊಳ್ಳಬಾರದೇಕೆ? ಇಂದು ಬದುಕುವುದೇ ಕಷ್ಟವಾಗಿರುವಾಗ ಸರ್ಕಾರದವರು ಬಡನೌಕರರ ವಿಷಯವಾಗಿ ಏನು ಕರುಣೆ ತೋರಿದ್ದಾರೆ? ಬಡವರೆಲ್ಲ ಲಂಚ ತೆಗೆದುಕೊಳ್ಳಲು ಅರ್ಹರೆಂಬೇ ಬಹುಜನರ ಭಾವನೆ. ಇನ್ನು ಅನ

ರ್ಹರು ಯಾರು ಎಂದರೆ—ಈ ಲಂಚ ಎಂಬ ಗುಳಿಗೆಯನ್ನು ನುಂಗಿ ಜೀರ್ಣಿಸಿಕೊಳ್ಳಲಾಗದವರು ಅನರ್ಹರು. ನನ್ನ ಸ್ನೇಹಿತ ಒಬ್ಬ ಸಾಯುತ್ತೇನೆ ಎಂದು ನಿರ್ಧಾರಮಾಡಿ ಒಂದು ರಾತ್ರಿ ಇಲಿ ಪಾಷಾಣವನ್ನು ನುಂಗಿ ಅದು ಜಠರದಲ್ಲಿ ಆರ್ಭಟ ಮಾಡಿದಾಗ ಹೋ ಎಂದು ಕೂಗಿ ಗಲಾಟೆಮಾಡಿ ತಾನು ಮಾಡಿದ್ದನ್ನು ಹೇಳಿ ವೈದ್ಯಸಹಾಯದಿಂದ ಬದುಕಿದ. ಅದೇ ನನ್ನ ಇನ್ನೊಬ್ಬ ಸ್ನೇಹಿತ ಬದುಕುತ್ತೇನೆ ಎಂದು ನಿರ್ಧಾರ ಮಾಡಿ ಲಂಚಕ್ಕೆ ಕೈ ಒಡ್ಡಿ ಪಡೆದು ನುಂಗಿ ಜೀರ್ಣಿಸಿಕೊಳ್ಳಲಾರದೆ ಲಾಗ ಹಾಕಿ ಪೋಲೀಸರ ಕೈಗೆ ಸಿಕ್ಕಿ ಸತ್ತು ಸುಣ್ಣವಾದ. ಇಂಥಾ ಜನ ಲಂಚ ಪ್ರಪಂಚದಲ್ಲಿ ಇರಬಾರದವರು. ಲಂಚಭೂಮಿ ಅಂಡಮಾನ್ ದ್ವೀಪದಂತೆ ಸತ್ಯ ಮತ್ತು ಧರ್ಮಕ್ಕೆ ದೂರವಾಗಿದೆ. ಅಲ್ಲಿನ ಜನರೆಲ್ಲ ಕದೀಮರೆ. ಕಸಿಯುವುದನ್ನು ಕರಗಿಸುವುದನ್ನು ಬಲ್ಲ ಬಲ್ಲಿದರವರು. ಅವ್ಮಾ ಅವರ ಮೂಲಕ ಆಫೀಸರನ್ನು ನೋಡುವ ಚಾಣಕ್ಯರವರು. ಬಂದ ಲಂಚದಲ್ಲಿ ಮೇಲಿನವರಿಗೆ ಕೆಳಗಿನವರಿಗೆ ಸಲ್ಲಬೇಕಾದ ಭಾಗವನ್ನು ಇವರು ಎಂದಿಗೂ ಮರೆಯುವುದಿಲ್ಲ. ಇವರು ಸಾಮಾನ್ಯವಾಗಿ ಕೊಟ್ಟಿದ್ದನ್ನು 'ಬಿಟ್ರೆ' ಮಾಡುವುದಿಲ್ಲ. ಮರಳಿ ಯತ್ನವನ್ನು ಸಹ ಮಾಡುವರು. ಸಹಾಯ ಮಾಡುವುದಕ್ಕಾಗಿ out of the way ಹೋಗುವುದೂ ಉಂಟು. ಇಂಥವರು ಮಾಡುವ ಕೆಲಸ ಒಳನೋಟಕ್ಕೆ ಲಂಚಗುಳಿತನವಾದರೂ ಹೊರನೋಟಕ್ಕೆ ಲೋಕೋಪಕಾರ.

'ಲಂಚಂ ಸರ್ವತ್ರ ಸಾಧನಂ' ಮತ್ತು 'ಲಂಚಮೇವ ಜಯತೆ' ಇವುಗಳೊಂದಿಗೆ "ಲಂಚಮೇವೋದ್ಧರಾಮ್ಯಹಂ" ಎಂಬುದನ್ನು ಸೇರಿಸಬಹುದು. ಇವು ಕ್ಷಣಿಕ ಹಾಸ್ಯಕ್ಕಾಗಿ ಜೋಡಿಸಿದ ಜಾಣ್ಣುಡಿಗಳು. ವೇದೋಕ್ತವಲ್ಲದಿದ್ದರೂ ವೇದೋಕ್ತವಾಕ್ಯಗಳಂತೆ ಚಿರಸ್ಥಾಯಿಯಾದವುಗಳು. ಈ ಯುದ್ಧ ಪ್ರಾರಂಭವಾಗಿ ಮುಗಿಯುತ್ತ ಬಂದಂತೆಲ್ಲ ಲಂಚದ ಪ್ರಾಬಲ್ಯ ಲಂಟಾನದಂತೆ ಬೆಳೆಯುತ್ತಿದೆ. ಯುದ್ಧದಿಂದ ಹಣದ ಬೆಲೆ ಮನುಷ್ಯನ ಬೆಲೆ ಕಡಿಮೆಯಾದರೂ ಅಸತ್ಯ, ಅಧರ್ಮ, ಮೋಸ, ಲಂಚ, ಇವುಗಳ ಬೆಲೆ ಏರಿದೆ. ಇಡೀ ಭಾರತದ ತಳಹದಿಯೇ ಈಗ ಅಲ್ಲಾಡಿದಂತೆ, ತೋರುತ್ತದೆ. ಜನ ಧನಪಿಶಾಚ ಹಿಡಿದವರಂತೆ ಆಡುತ್ತಿದ್ದಾರೆ. ಕಾಸು

ಕೊಟ್ಟರೆ ತನ್ನ ತಮ್ಮಂದಿರನ್ನಾದರೂ ಕತ್ತಿಯಿಂದ ಇರಿದುಬಿಡುವಷ್ಟು ಮನುಷ್ಯ ಕ್ರೂರಿಯಾಗಿದ್ದಾನೆ. ಇದೆಲ್ಲ ಕೊನೆಗಾಣುವುದೆಂತು? ಲಂಚ ಹೋಗಬೇಕು ಎಂದು ಹೇಳಿದರೆ ಲಂಚ ಓಡಿಹೋಗುವುದಿಲ್ಲ. ಕಜ್ಜಿಯಂತೆ ಅದು ಎಲ್ಲರ ಮೈಯನ್ನೂ ಆವರಿಸಿಬಿಟ್ಟಿದೆ. ಅದು ಪೂರ್ಣ ನಾಶವಾಗಬೇಕಾದರೆ ಮನುಷ್ಯನ ರಕ್ತ, ಮನುಷ್ಯನ ಮನಸ್ಸು, ಮನುಷ್ಯನ ಹೃದಯ ಶುದ್ಧಿಯಾಗಬೇಕು. ಅದಕ್ಕಿರುವುದು ಎರಡೇ ದಾರಿ:—

(1) ಬುದ್ಧನ ಅವತಾರ.

(2) ಭೂಕಂಪ.

ಯಾವುದಾದರೂ ಒಂದಾದರೆ ಸಾಕು. ಇಲ್ಲ ಧರ್ಮ ಉದಯವಾಗುತ್ತದೆ. ಇಲ್ಲ ಅಧರ್ಮ ನಾಶವಾಗುತ್ತದೆ. ಪರಸ್ಪರ ಪ್ರೇಮ, ಸೌಹಾರ್ದ ವಿಶ್ವಾಸ ಇವೆಲ್ಲ ಇದ್ದು ಊರೆಲ್ಲ ಒಂದು ಮನೆಯಂತಿದ್ದು ಆಗ ನನಗೆ ಯಾರಾದರೂ ಲಂಚ ಕೊಟ್ಟರೆ —ಏಕೆ ಆಟಂಬಾಂಬ್ ಕೊಟ್ಟರೂ ಸರಿಯೆ—ಸಂತೋಷದಿಂದ ಸ್ವೀಕರಿಸುತ್ತೇನೆ. ಏಕೆಂದರೆ ಅದು ಪ್ರೇಮದ ಕೊಡುವ ಲಂಚದಂತೆ ಅತಿಮಧುರ!

ಸನಮಸ್ಕಾರಗಳು,

**ನಿಮ್ಮ ವಿಶ್ವಾಸಿ.**



# ಅವತಾರವಾದ ಮೇಲೆ

ಕೀರ್ತಿ ಯಾವಾಗ ಬರುತ್ತದೆ ಎಂದು ಹೇಳುವುದು ಕಷ್ಟ. ಆಸೆ ಕೀರ್ತಿಯಲ್ಲಿ ಮುಳುಗಿ, ಮುಖಕ್ಕೆ ಮಂಗಳಾರತಿ ಎತ್ತಿಸಿಕೊಂಡು ಮುಸುಗೆಳೆದು ಮಲಗಿದವರ ಮನೆಯ ಬಾಗಿಲಲ್ಲಿ ಬೆಳಗಾಗುವುದರಲ್ಲಿ ಕೀರ್ತಿ ಮೂಡಿ ನಿಲ್ಲಬಹುದು. ಬಾಗಿಲನ್ನು ಕೀರ್ತಿಕಾಮಿನಿ ತಟ್ಟುತ್ತಿದ್ದರೂ ಬಾಗಿಲು ತೆರೆಯದ ಧೀರರಿರಬಹುದು. "ಸಿಡಿಸುತ್ತಿಹೆ ಏಕೆ! ತೊಲಗಾಚೆ ಕೀರ್ತಿ ಶನಿ!" ಎಂದು ಹಾಡುವ ಕವಿಗಳಿರಬಹುದು, ಕೀರ್ತಿ ನಶ್ವರ ಎಂದು ಬೋಧಿಸುವ ದಾರ್ಶನಿಕರಿರಬಹುದು. ಅದು ಕೇವಲ ದೊಡ್ಡವರಿಂದ ಮಾತ್ರ ಆಗತಕ್ಕ ಕಾರ್ಯ. ನಾವು ಸಾಮಾನ್ಯರು ಕೀರ್ತಿಯ ನೆರಳು ಕಂಡರೂ ಇಳಿಬೀಳುತ್ತೇವೆ. ಮನೆಯಲ್ಲಿ ಚಿತ್ರಾನ್ನ ಪಾಯಸ ಮಾಡಿದ್ದರೂ ಹೊರಗೆ ಹೋಳಿಗೆ ಬೋಂಡಾ ಅಂತ ಸೇರಿಸಿ ಹೇಳುವಹಾಗೆ ನಮ್ಮಗೆ ತಗುಲುವ ಕೀರ್ತಿಯ ಕಣವನ್ನು ರಣವನ್ನಾಗಿ ಮಾಡಿ ಜಂಭ ಕೊಚ್ಚುವುದು ನಮ್ಮ ರೀತಿ.

ನನ್ನ ಮೊದಲ ಕತೆ ಪ್ರಬುದ್ಧಕರ್ಣಾಟಕದಲ್ಲಿ ಅಚ್ಚಾದಾಗಲೇ ನನ್ನ ಹೆಮ್ಮೆ ಅರಳಿ ಹೂವಾಗಿತ್ತು. ಈಗಂತೂ ಅವತಾರ ಎಂಬ ನನ್ನ ಸಣ್ಣ ಕಥೆಗಳ ಸಂಗ್ರಹವೊಂದು ಪ್ರಕಟವಾದಮೇಲೆ ನನ್ನ ಹೆಮ್ಮೆ ಅಳತೆ ಮೀರುತ್ತಿದೆ ನೆಲದಿಂದ ನಾನು ಬೇರೆಯಾಗಿ ನಿಂತು, ನನ್ನನ್ನು ನಾನೇ ಕಂಡು ಬೆರಗಾಗುತ್ತಿದ್ದೇನೆ.

ನಗುವನಂದದಲ್ಲಿ ಆರು ತಿಂಗಳಿಂದ ಬರುತ್ತದೆ ಬರುತ್ತದೆ ಅನ್ನಿಸಿಕೊಂಡು ನನ್ನ ಅವತಾರ ಅವತರಿಸಿದಾಗ ನನಗೆ ವಿಚಿತ್ರವಾ ಉದ್ವೇಗ ಉಂಟಾಗಲಾರಂಭಿಸಿತು. ಬಹುಶಃ ವಾಲ್ಮೀಕಿಗೂ ತನ್ನ ರಾಮಾಯಣ

ಮಹಾಕೃತಿಯನ್ನು ಕಂಡಾಗ ಅಷ್ಟು ಹೃದಯಸಂವೇದನೆ ಆಗಿರಲಿಕ್ಕಿಲ್ಲ. ನನ್ನ ಕಾವ್ಯಕ್ಕೆ ನಾನೆ ಮಣಿದೆ. ಅದರ ಅಂದ ಚಂದವನ್ನು ನೋಡಿ ಹಿಗ್ಗಿದೆ. ಇದ್ದ ಐವತ್ತು ಪ್ರತಿಗಳಮೇಲೂ ಪ್ರೀತಿಯಿಂದ, ವಿಶ್ವಾಸದಿಂದ, ಗೌರವಪೂರ್ವಕ ಎಂದೆಲ್ಲಾ ಬರೆದು ಗೆಳೆಯರಿಗೆ ಹಿರಿಯರಿಗೆ ಹಂಚಿದೆ. ಅಂದಿನಿಂದ ನಾನು ನಾನಲ್ಲ. ನಾನೊಬ್ಬ ಲೇಖಕ. ನನ್ನ ಗ್ರಂಥ ಅಚ್ಚಾಗಿದೆ. ಜನವೆಲ್ಲ ನನ್ನ ಪುಸ್ತಕವನ್ನು ಕೊಂಡು ಓದುತ್ತಾರೆ. ನೆನ್ನೆ ಮೊನ್ನೆಯವರೆಗೆ ಹೆಸರಿಲ್ಲದಿದ್ದ ನಾನು ಇಂದು ಹೆಸರಾಂತಿದೇನೆ. ರಸ್ತೆಯಲ್ಲಿ ಹೋಗುತ್ತಿದ್ದರೆ ಜನವೆಲ್ಲ ನನ್ನನ್ನೇ ನೋಡುತ್ತಾ ಇದ್ದಾರೆ ಎಂದು ನನ್ನ ಭಾವನೆ. ಅವರೇನೋ ನಿಜವಾಗಿಯೂ ನನ್ನನ್ನೇ ನೋಡುತ್ತ ಹೋಗುತ್ತಿದ್ದರು. ಏಕೆಂದರೆ ಅವರು ನನ್ನನ್ನು ನೋಡುತ್ತಾರೋ ಇಲ್ಲವೋ ಎಂದು ನಾನು ಅವರನ್ನು ದುರುದುರು ನೋಡುತ್ತಿದ್ದುದರಿಂದ!

ಮೊನ್ನೆ ನಾನು ಯಾವುದೋ ಒಂದು ಸಂಘದ ಆಶ್ರಯದಲ್ಲಿ ಭಾಷಣವೊಂದನ್ನು ಕೊಡಬೇಕಾಗಿತ್ತು. ಅಲ್ಲಿಗೆ ಹೋದೆ. ಜನ ಕಿಕ್ಕಿರಿದು ನೆರೆದಿದ್ದರು, ನನ್ನ ಭಾಷಣವನ್ನು ಕೇಳುವುದಕ್ಕಾಗಿ. ಹೋಗುವ ದಾರಿಯಲ್ಲಿ ಬಾಗಿಲಹತ್ತಿರ ಇಬ್ಬರು ಹುಡುಗರು ನಿಂತು ಏನನ್ನೋ ಮಾತನಾಡುತ್ತಿದ್ದರು. ಹಾಗೇ ಮೆಲ್ಲಗೆ ಕಿವಿ ಹರಿಬಿಟ್ಟೆ ಅವರ ಮಾತುಗಳನ್ನು ಕೇಳುವುದಕ್ಕಾಗಿ. (ಹೀಗೆ ಮಾಡದಿದ್ದರೆ ಕಥೆ ಬರೆಯಲು ವಿಷಯ ಎಲ್ಲಿಂದ ಸಿಗಬೇಕು!) ಅವರಲ್ಲಿ ಒಬ್ಬ ಹೇಳ್ತಾಇದ್ದ "ಇಲ್ಲಪ್ಪ ಇವತ್ತು ಕೇರಂ ಸೆಮಿಫೈನಲ್ಸ್ ಇದೆ. ನೋಡೋದಕ್ಕೆ ಹೋಗಲೇಬೇಕು. ಇಲ್ಲಿ ನೋಡಿದರೆ ಪ್ರಹ್ಲಾದರಾಯರ ಭಾಷಣ ಇದೆ. ಕೇಳಲೇ ಬೇಕು. ಹೀಗಾಗಿ ಭಾಷಣಕ್ಕೆ ಬಂದು ಬಿಟ್ಟೆ" ಎಂದು: ಅದಕ್ಕೆ ಇನ್ನೊಬ್ಬ ಸ್ನೇಹಿತ "ಅಯ್ಯಾ ಇವರೇ ಏನಯ್ಯ ಅವತಾರ ಅಂತ ಪುಸ್ತಕ ಬರೆದಿರೋದು" ಎಂದು ಪ್ರಶ್ನೆಮಾಡಿದ. "ಹೌದು. ಏಕೆ ನೀನು ಅದನ್ನು ಓದಿಡೀಯಾ" ಎಂದು ಮೊದಲನೆಯವನು ಹೇಳಿದ್ದಕ್ಕೆ ಎರಡನೆಯವನು ತಲೆ ಆಡಿಸುತ್ತ "ಇಲ್ಲಪ್ಪ. ಪುಸ್ತಕದ ಹೆಸರು ಕೇಳಿದ್ದೇನೆ. ಚೆನ್ನಾಗಿದೆ ಅಂತ ಓದಿದವರು ಹೇಳಿದರಪ್ಪ. ಏನೇ ಆಗಲಿ ಇಲ್ಲಿಯವರೆಗೆ ಬಂದಿದೇನೆ. ಆಸಾಮಿ ಹೇಗಿದಾರೋ ನೋಡಿಕೊಂಡು ಹೋಗಿಬಿಡುತ್ತೇನೆ" ಎಂದ. ಮುಂದೆ

ಏನೇನು ಮಾತು ನಡೆಯಿತೋ ನನಗೆ ತಿಳಿಯದು. ನಾನು ಸರಸರ ಎಂತ ಮುಂದೆ ಹೋಗಿಬಿಟ್ಟೆ. ಹೋಗುವಾಗ ಹಿಂತಿರುಗಿ ಅವರ ಮುಖದ ಗುರುತು ಸ್ವಲ್ಪ ಇಟ್ಟುಕೊಂಡು ಮುಂದೆ ಹೆಜ್ಜೆ ಇಟ್ಟೆ. ಅಂದು ಭಾಷಣ ಮಾಡಿದ ಮುಕ್ಕಾಲು ಗಂಟೇನೂ ನಾನು ಆ ಇಬ್ಬರು ಹುಡುಗರ ಕಡೆಗೇ ತಿರುಗಿನಿಂತು ಮಾತನಾಡಿದೆ, ಚೆನ್ನಾಗಿ ಆಸಾಮೀನ ನೋಡಲಿ ಎಂದು!

ನಾನು ಇರುವುದು ಚಾಮರಾಜ ಪೇಟೆಯಲ್ಲಿ, ಯಾವುದೋ ಒಂದು ರಸ್ತೆಯಕೊನೆಯಲ್ಲಿ. ಆದರೆ ನನ್ನ ಪುಸ್ತಕ ಅಚ್ಚಾದಮೇಲೆ ನನ್ನ ಮನೆ ನನ್ನ ಬೀದಿ ಇವು ಜನಕ್ಕೆಲ್ಲ ಪರಿಚಯವಾಗಿಬಿಟ್ಟಿದೆ ಎಂದು ನನ್ನ ಭಾವನೆ. ಮೊನ್ನೆ ಸಲೂನಿನಲ್ಲಿ ಯಾರೋ ನನ್ನ ವಿಷಯವಾಗಿ ಮಾತನಾಡುತ್ತ ಇದ್ದರು. ಒಬ್ಬರ ಕೈಯಲ್ಲಿ ಅವತಾರದ ಒಂದು ಪ್ರತಿ ಇತ್ತು. ಪುಸ್ತಕ ಬಹಳ ಚಿಕ್ಕದಾಯಿತು. ಆದರೂ ಚನ್ನಾಗಿದೆ. ಇದೇನು ಅಧ್ವಾನದ ಪೇಪರು ಹಾಕಿದಾರೆ. ಬೈಂಡಿಗ್ ಪರವಾಗಿಲ್ಲ ಎಂದು ಮುಂತಾಗಿ ವಿಮರ್ಶೆ ಪ್ರಾರಂಭವಾದದ್ದು ಕೊನೆಗೆ ನನ್ನ ಹತ್ತಿರವೇ ಬಂತು! ಏನಯ್ಯ ಪ್ರಹ್ಲಾದರಾಯರು ಇದೇ ಬೀದೀಲಿ ಇದಾರಂತೆ. ಮನುಷ್ಯ ಪುಸ್ತಕ ದಷ್ಟೆ, ಕತೆಯಷ್ಟೆ ಚಿಕ್ಕವರಂತೆ. ಸಾಧುವಾದರೂ ಮುಂಗೋಪಿ. ನಕ್ಕರೂ ವ್ಯಂಗ್ಯ. ಯಾವಾಗಲೂ ಯಾರನ್ನು ಕಂಡರೂ ಹಾಸ್ಯದ ಬುದ್ಧಿಯಂತೆ! ಎಂದೆಲ್ಲಾ ಪ್ರಾರಂಭಿಸಿದರು. ಈ ಮಾತಿನ ಅಂತೆ ಕಂತೆಯ ಪುರಾಣ ಎಲ್ಲ ಬೆಳೆದು ಬಿಡುತ್ತದೋ ಎಂದು ನಾನು ಮಧ್ಯ ಬಾಯಿಹಾಕಿ "ನೀವು ಹೇಳುತ್ತಿರುವುದೆಲ್ಲ ಸುಳ್ಳು ಸಾರ್" ಎಂದೆ. ಎಲ್ಲರೂ ಆಶ್ಚರ್ಯದಿಂದ ನನ್ನ ಕಡೆ ನೋಡುತ್ತಾ "ಏನ್ರೀ ನಿಮಗೆ ಅವರ ಪರಿಚಯ ಚೆನ್ನಾಗಿ ಇದೆ ಏನ್ರೀ?" ಎಂದು ಕೇಳಿದರು. ಅದಕ್ಕೆ ನಾನು "ಹೌದು. ಅವರು ಬಹಳ ಸಭ್ಯರು" ಎಂದಿಷ್ಟೆ ಹೇಳಿ ಅಲ್ಲಿಂದ ಹೊರಟು ಬಿಟ್ಟೆ.

ಕವಿಗಳು, ಕತೆಗಾರರು ಆದಮಾತ್ರಕ್ಕೇ ಅವರಿಗೆ ಯಾವಾಗಲೂ ಹೊಟ್ಟೆ ತುಂಬಿರುತ್ತದೆ ಎಂದು ಹೇಳಲಾಗುತ್ತದೆಯೆ! ಅವರಿಗೂ ಒಂದು ಹೊಟ್ಟೆ ಇರುತ್ತೆ. ಅದಕ್ಕಿಷ್ಟು ಪಡಿ ತರಬೇಕು. ಅದಕ್ಕೊಂದು ರೇಷನ್ ಕಾರ್ಡು ಬೇಕು. ಅದಕ್ಕಾಗಿ ರೇಷನ್ ಆಫೀಸಿಗೆ ಹೋಗಿ ಕಾರ್ಡಿನ ಮೇಲೆ ನಾನು ಹಾಕಿದ ರುಜುವನ್ನು ನೋಡಿ ಕ್ಲಾರ್ಕು ಆಶ್ಚರ್ಯದಿಂದ "ಏನ್

ಸಾರ್ ನಿಮ್ಮ ಹೆಸರೂ ಎನ್. ಪ್ರಹ್ಲಾದರಾವ್ ಅಂತ ಇದೆ. ......" ಎಂದ. ಅವನು ಮಾತು ಮುಗಿಸಲು ನಾನು ಬಿಡವೆ ಮಧ್ಯೆ ಬಾಯಿ ಹಾಕಿ "ಹೌದಪ್ಪ ಅವತಾರವನ್ನು ಬರೆದವರ ಹೆಸರು ನನಗೆಡಿಯಾದರೂ ಅವರಿಗೆ ಬಂದ ಹೆಸರು ನನಗೆ ಬರಲಿಲ್ಲ" ಎನ್ನುತ್ತ ಕಾರ್ಡನ್ನು ಮರೆತೇ ಮನೆಗೆ ಹೋಗಿಬಿಟ್ಟೆ!

ಮೈಸೂರಿಗೆ ನಾನು ಹೊರಟ ಗಾಡಿಯಲ್ಲಿ ನನ್ನ ಪಕ್ಕದಲ್ಲಿ ಕುಳಿತವರೊಬ್ಬರು ನನ್ನ ಅವತಾರವನ್ನು ಓದುತ್ತಾ ಇದ್ದರು. ನನ್ನ ಪುಸ್ತಕ ಚೆನ್ನಾಗಿ ಖರ್ಚಾಗಬೇಕೆಂದು ನನ್ನ ಆಸೆ. ಎಲ್ಲ ಲೇಖಕರ ಆಶೆಯೂ ಅದೇ ಇರುತ್ತೆ ಅನ್ನಿ. ಅದಕ್ಕಾಗಿ ದಿನಾ ಹೊಸ ಪುಸ್ತಕ ನೋಡುವ ನೆವದಿಂದ ಸತ್ಯಶೋಧನ ಪುಸ್ತಕ ಭಂಡಾರಕ್ಕೆ ಹೋಗಿ ನನ್ನ ಅವತಾರ ಪ್ರತಿಗಳು ಎಷ್ಟು ಖರ್ಚಾಗಿವೆ ಎಂಬುದನ್ನು ನೋಡಿ ಬರುತ್ತಿದ್ದೆ. ಅಂಥಾದ್ದರಲ್ಲಿ ರೈಲಿನಲ್ಲಿ ನನ್ನ ಪುಸ್ತಕ ನೋಡಿ ನನಗೆ ಎಷ್ಟು ಸಂತೋಷ ವಾಗಿರಬೇಕು. ರೈಲ್ವೆ ಬುಕ್ ಸ್ಟಾಲಿನಲ್ಲಿ ಅಷ್ಟೊಂದು ಪತ್ರಿಕೆಗಳಿರುತ್ತವೆ. ಬೇರೆ ಬೇರೆ ಭಾಷೆಯ, ಇಂಗ್ಲೀಷಿನ ಪುಸ್ತಕಗಳಿರುತ್ತವೆ. ಅವನ್ನೆಲ್ಲ ಬಿಟ್ಟು ನನ್ನ ಪುಸ್ತಕವನ್ನೇ ಆರಿಸಿ ತೆಗೆದಿರಬೇಕಾದರೆ ಅದರಲ್ಲಿ ಏನೋ ಯೋಗ್ಯತೆ ಇರಬೇಕುತಾನೆ. ಅದೇ ನಾನು ಹೇಳೋದು. .ಜನ ಸೈ ಅನ್ನಬೇಕು. ಆಗ ಕವಿಗೆ ಕೀರ್ತಿ, ರೈಲು ರೈಲಿನಲ್ಲಿ ಕವಿಯ ಪುಸ್ತಕ ಖರ್ಚಾಗಬೇಕು. ಅದು ಕವಿಯ ಘನತೆಯ ಅಳತೆ. ಓದುತ್ತ ಓದುತ್ತ ನನ್ನ ಪಕ್ಕದಲ್ಲಿ ಕುಳಿತವರು ಯಾವುದೋ ಸನ್ನಿವೇಶದಲ್ಲಿ ಜೋರಾಗಿ ನಕ್ಕರು. ನನಗೆ ಪರಮ ಕುತೂಹಲವಾಯಿತು. ಅವರನ್ನು ನೋಡಿದೆ. ನಟ್ಟ ಮನಸ್ಸಿನಿಂದ ಪುಸ್ತಕವನ್ನ ಓದುತ್ತಿದ್ದರು. ಅಲ್ಲ ನನ್ನ ಪುಸ್ತಕ, ಒಬ್ಬರಿಗೆ ಒಂದಿಷ್ಟು ನಗುವನ್ನು ಒಂದು ಸಾರಿಯಾದರೂ ಕೊಟ್ಟಿತಲ್ಲ ಎಂದು ನನಗೆ ಆನಂದ. ಯಾವ ಭಾಗವನ್ನು ಓದಿ ಅವರು ನಕ್ಕರು ಎಂಬುದನ್ನು ತಿಳಿಯಲು ನನಗೆ ಕುತೂಹಲ. ಮಾತನಾಡಿಸುವುದಕ್ಕೆ ಪರಿಚಯವಿಲ್ಲ. ಅಲ್ಲದೇ ನಾನೇ ಅದು ನನ್ನ ಪುಸ್ತಕ ಎಂದು ಪರಿಚಯ ಮಾಡಿಕೊಳ್ಳಲಾ! ನಾನು! ಅದಕ್ಕೋಸ್ಕರ ಸ್ವಲ್ಪ ಹಾಗೆಯೆ ಅವರ ಹತ್ತಿರ ಸರಿದು ಮೆಲ್ಲಕ್ಕೆ ಪುಸ್ತಕದ ಕಡೆ ಇಣಿಕಿ ನೋಡಿದೆ. ಆಗ ಅವರು ಸರಕ್ಕನೆ ಪುಸ್ತಕವನ್ನು

ಮಡಿಸಿ ಆಕಡೆ ಎಳೆದುಕೊಂಡು "ಏನ್ರಿ ನೀವೂ ಹೀಗೆ ಮಾಡಿದ್ರೆ ಹೇಗ್ರಿ. ಪುಸ್ತಕಗಳಿಗೆ ಈಗ ಕೇವಲ ನಾಲ್ಕಾರು ಆಣೆ ಬೆಲೆಯಾಗಿದೆ. ಚೆನ್ನಾಗಿದೆ. ಒಂದನ್ನು ಕೊಂಡುಕೊಂಡು ಓದಬಾರದೇನ್ರಿ. ಪಾಪ ಬರೆದವರಿಗೆ ಅಚ್ಚು ಹಾಕಿದವರಿಗೆ ಎರಡು ಕಾಸು ಗಿಟ್ಟಲಿ. ನಾವು ಕಾಫಿ ಕುಡಿಯೋ ಬೆಲೆ ಇಲ್ಲಪ್ಪ. ಏಕೆ ಒಂದು ಕೊಳ್ಳಬಾರದು........" ಎಂದು ದೊಡ್ಡ ಭಾಷಣವನ್ನೇ ಮಾಡಿದರು. ಮನೆಯಲ್ಲಿ ಹತ್ತು ಪುಸ್ತಕ ಇದೆ ಸ್ವಾಮಿ ಎಂದು ಮನಸ್ಸಿನಲ್ಲಿ ಅಂದುಕೊಂಡು ಸುಮ್ಮನಾದೆ ಮತ್ತು ಪ್ರಯಾಣ ಮುಗಿಯುವ ವರೆಗೂ 'ಅವರ' ಪುಸ್ತಕದ ಕಡೆಗೆ ತಿರುಗಿನೋಡಲಿಲ್ಲ!

ಮೊನ್ನೆ ಲೈಬ್ರರಿಯಲ್ಲಿ ಆದ ವಿಷಯವನ್ನಂತೂ ನಾನು ಮರೆಯುವ ಹಾಗೆಯೆ ಇಲ್ಲ. ಅವತಾರವನ್ನು ಓದಲು ತೆಗೆದುಕೊಂಡು ಹೋದವ ರೊಬ್ಬರು ಲೈಬ್ರರಿಗೆ ಹಿಂತಿರುಗಿ ಕೊಡಲು ಬಂದರು. ಪುಸ್ತಕ ಆಗಲೇ ನುಚ್ಚು ನೂರಾಗಿತ್ತು. ಬಹುಶಃ ಬಹಳ ಜನ ಆಗಲೇ ನನ್ನ ಪುಸ್ತಕವನ್ನು ಓದಿದ್ದಾರೆ ಎಂದು ಕೊಂಡೆ ಮನಸ್ಸಿನಲ್ಲಿ. ಕ್ಲಾರ್ಕು ಪುಸ್ತಕ ಏಕೆ ಅಷ್ಟು ಹರಿದು ಹೋಗಿದೆ ಎಂದು ಕೇಳಿದ್ದಕ್ಕೆ ಅವರು "ಕ್ಷಮಿಸಿ ಸ್ವಾಮಿ. ಸಾಮಾನ್ಯವಾಗಿ ನಾನು ಕನ್ನಡ ಪುಸ್ತಕವನ್ನು ಓದೋದಿಲ್ಲ. ನನ್ನವಳಿಗೆ ಅಂತ ಒಯ್ದೆ. ಅವಳು ಮಗೂನ ಕೈಲಿ ಕೊಟ್ಟು ಈ ಅವತಾರ ಮಾಡಿಸಿ ದ್ದಾಳೆ. ಹೋಗಲೀ ಬಿಡಿ. ಮಗೂನಾದ್ರಾ ಓದಿತಲ್ಲ" ಎಂದು ನಕ್ಕರು. ನನ್ನ ಪುಸ್ತಕ ಶಿಶು ಸಾಹಿತ್ಯದ ಗುಂಪಿಗೆ ಸೇರಿದ್ದನ್ನು ಕಂಡು ನನಗೆ ಹೃದಯ ಮಿಡಿದಂತಾಯಿತು!

ಪಂಡಿತರೊಬ್ಬರಿಗೆ ನಾನು ಅವತಾರದ ಒಂದು ಪ್ರತಿಯನ್ನು ಕೊಟ್ಟು ಓದಹೇಳಿ, ನಾಲ್ಕಾರು ದಿನಗಳ ನಂತರ ಭೇಟಿಯಾದಾಗ ಪುಸ್ತಕದ ವಿಚಾರ ದಲ್ಲಿ ಅವರ ಅಭಿಪ್ರಾಯವನ್ನು ಕೇಳಿದೆ. ನನ್ನ ಪುಸ್ತಕದ ವಿಚಾರದಲ್ಲಿ ಎಲ್ಲರೂ ಒಳ್ಳೆಯ ಮಾತನ್ನೇ ಆಡಬೇಕು ಎಂಬುದು ನನ್ನ ಬಯಕೆ. ಖಡಾಖಂಡಿತವಾಗಿ ನಿರ್ಭಯವಾಗಿ ನಿಮ್ಮ ಅಭಿಪ್ರಾಯವನ್ನು ತಿಳಿಸಿರಿ ಎಂದು ನಾನು ಹೇಳುತ್ತಿದ್ದೆನಾದರೂ ಅಂತರಾಳದಲ್ಲಿ ಭಲೆ ಅನ್ನಿಸಿಕೊಳ್ಳುವ ಆಶೆ ಇದ್ದೇ ಇತ್ತು. ಅದಕ್ಕಾಗಿಯೇ ಪತ್ರಿಕೆಗಳಲ್ಲಿ ನನ್ನ ಪುಸ್ತಕದ ವಿಚಾರವಾಗಿ ಬಂದ ವಿಮರ್ಶೆಗಳನ್ನೆಲ್ಲ ಓದುತ್ತಿದ್ದೆ. ಒಂದು ಕಡೆ ನಾನು-

ಲೇಖಕ. ಇನ್ನೊಂದು ಕಡೆ ಅವರು – ವಿಮರ್ಶಕರು. ಮುಗುದೊಂದು ಕಡೆ ಜನ – ಓದುಗರು. ಒಂದೇ ಪುಸ್ತಕದ ವಿಚಾರದಲ್ಲಿ ಈ ಮೂವರ ಅಭಿಪ್ರಾಯಗಳೂ ಭಿನ್ನವಾಗಬಲ್ಲವು ಎಂಬುದನ್ನು ನಾನು ಬಹಳ ಬೇಗ ಕಂಡೆ. ಪಂಡಿತರು ವ್ಯಂಗ ಮತ್ತು ಹಾಸ್ಯವನ್ನು ಕುರಿತು ಚರ್ಚೆ ಮಾಡಿದರು. ಅವರು ಹೇಳಿದರು "ಏನು ನಿಮ್ಮಂಥವರು ಇಷ್ಟು ಲಗು ವಾಗಿ ಬರೆಯುತ್ತ ಕುಳಿತರೆ ಹೇಗೆ? ಬಿಗಿಯಾದ ಭಾಷೆಯಲ್ಲಿ, ಆಳವಾಗಿ, ಗಂಭೀರವಾಗಿ ಬರೆಯಬೇಕು. ಶಾಸ್ತ್ರ ಗೀಸ್ತ್ರ ಅಭ್ಯಾಸಮಾಡಿ. ಇನ್ನೂ ಸ್ವಲ್ಪ ಸೀರಿಯಸ್ಸ ಆದ ವಿಚಾರಗಳ ಮೇಲೆ ಬರೆಯಬೇಕು." ಎಂದು.

ಅವರ ಒಂದೊಂದು ಮಾತಿಗೂ ನಾನು ಹೂಗೊಟ್ಟು ಸಮ್ಮತಿ ಯನ್ನು ಸೂಚಿಸಿದೆ. ಅವರು ಹೇಳುವುದೆಲ್ಲ ನಿಜ. ಆದರೂ ಅವರು ಹೇಳಿದಂತೆ ಬಿಗಿಯಾಗಿ ಬರೆಯಲು ನನಗೆ ಇರುವ ಹತಾರಗಳ ಸಹಾಯ ಸ್ವಲ್ಪ. ಭಾಷೆ ಬಿಗಿಯಾಗಬೇಕಾದರೆ ಕಾಂಕ್ರೀಟ್ ಬೇಕು. ಅದಕ್ಕೆ ಅಧ್ಯಯನ, ಪುನರಾವರ್ತನೆ ಪರಿಶೀಲನೆ ಎಲ್ಲ ಅವಶ್ಯಕ. ಆಳವಾಗಿರ ಬೇಕು ಎಂದರೆ ಸಾಹಿತ್ಯದ ಮೈದಾನದಲ್ಲಿ ದೊಡ್ಡ ಬಾವಿ ತೆಗೆಯಬೇಕು. ಆಳವಾಗಿ ಯೋಚನೆ ಮಾಡಬೇಕು. ಗಂಭೀರವಾಗಬೇಕಾದರೆ ತುಂಬ ನೀರು ಬೇಕು. ರಸ ತುಂಬ ಬೇಕು.

ಹತಾರಗಳೆಲ್ಲ ಸಿದ್ಧವಾಗಿ ಕಾಲಾವಕಾಶವಾಯಿತೆಂದರೆ ಒಂದಲ್ಲ ಒಂದು ದಿನ ಅದನ್ನೂ ಮಾಡಿಯೇ ಬಿಡುತ್ತೇನೆ!



# ನಾನು ಲೇಖಕನಾದುದು

ಕವಿಯಾಗಬೇಕೆಂಬ ಆಶೆ ನನಗೆ ಬಹಳ ಕಾಲದಿಂದಲೂ ಇತ್ತು.

ಕೋಳಿದಾಸ, ಆಭಾಸ, ವರ್ಷ, ವಿಭೂತಿ ಮೊದಲಾದ ಮಹಾ ಕವಿಗಳ ಮಹಾ ಕಾವ್ಯಗಳಿಗೆ ಸಂದೊರೆಯಾಗುವ ಉತ್ತಮ ಕಾವ್ಯ ವೊಂದನ್ನು ಬರೆಯಬಾರದೇಕೆ ಎಂದು ಯೋಚಿಸತೊಡಗಿದೆ. ತಣ್ಣೀರಿನಲ್ಲಿ ಸ್ನಾನಮಾಡಿ ಒದ್ದೆ ಬಟ್ಟೆಯಲ್ಲಿ ದೇವರೆದುರು ನಿಂತು ಕಾವ್ಯಸ್ಫೂರ್ತಿಯನ್ನು ಬೇಡಿದೆ. ಎರಡು ದಿನಗಳಲ್ಲಿ ಚಳಿ ಜ್ವರ ಬಂತೇ ಹೊರತು ಕಾವ್ಯ ಬರಲಿಲ್ಲ. ಋಷಿಯಲ್ಲದವನು ಕವಿಯಾಗಲಾರ ಎಂದು ತಪಸ್ಸು ಮಾಡಲು ಕುಳಿತೆ. ಮೈಗೆ ಗೆದ್ದಲು ಹಿಡಿಯಿತೇ ಹೊರತು ಸಿದ್ಧಿಯಾಗಲಿಲ್ಲ. ಮನೆಯ ಮೇಲೆ ಬಂದು ಕುಳಿತ ಎರಡು ಗುಬ್ಬಚ್ಚಿಗಳ ಕಡೆ ಒಂದು ಕಲ್ಲೆಸೆದೆ. ಅಕಸ್ಮಾತ್ ಕಲ್ಲು ಒಂದು ಹಕ್ಕಿಗೆ ತಗುಲಿ ಅದು ಪ್ರಾಣ ಬಿಟ್ಟಿತು. ಆ ಹಾ ಎಂಥಾ ಸನ್ನಿವೇಶ. ಬದುಕಿದ ಹಕ್ಕಿ - ಅದು ಹೆಣ್ಣೋ ಗಂಡೋ ತಿಳಿಯದು – ಸತ್ತ ಹಕ್ಕಿಯನ್ನು ನೋಡಿ ಪ್ರಲಾಪಿಸುತ್ತಿದೆ. ಅದರ ಕಷ್ಟವನ್ನು ನಾನೂ ಅನುಭವಿಸಲು ಯತ್ನಿಸಿದೆ. ಕಷ್ಟದಿಂದ ಕಾವ್ಯ ಹುಟ್ಟಲಿಲ್ಲ. ನೋವಿನಿಂದ ನಾಟಕವಾಗಲೀ, ಪ್ರಲಾಪದಿಂದ ಪ್ರಬಂಧ ವಾಗಲೀ, ಶೋಕದಿಂದ ಶ್ಲೋಕವಾಗಲೀ ಉದ್ಭವಿಸಲಿಲ್ಲ.

ಹಿಂದಿನ ಕವಿಗಳು ಹೇಗೆ ತಮ್ಮ ಕಾವ್ಯಗಳನ್ನು ಬರೆದರು ಎಂಬುದು ನನಗೆ ಅರ್ಥವಾಗಲೇ ಇಲ್ಲ. ಅವರು ಬರೆದಿಟ್ಟಿರುವುದನ್ನು ಓದುವುದೇ ಕಷ್ಟ. ಅಷ್ಟಿದೆ ಅವರ ಬರವಣಿಗೆಯ ರೀತಿ. ಅದನ್ನೆಲ್ಲ ಅವರು ಹೇಗೆ ಬರೆದರು? ಹಾಗಾದರೆ ಕವಿಗಳ ವಿಚಾರವಾಗಿ ಪ್ರತೀತವಾಗಿರುವ ಕಥೆಗಳೆಲ್ಲ ಸುಳ್ಳೆ?

ಕಾವ್ಯದ ಕಿಡಿ ನನ್ನಲ್ಲಿ ಉದ್ಭವವಾಗದಿಲು ನನಗೆ ಸಿಟ್ಟು ಬಂತು. ಹಿಂದಿನದೆಲ್ಲ ಕೇವಲ ಮಡಿ, ಸಂಪ್ರದಾಯ ಅಂಧಶ್ರದ್ಧೆ. ಇವು ಇಂದಿನ ಕಾಲಕ್ಕೆ ಹೊಂದುವುದಿಲ್ಲ. ಸಮಾಜ ಬೆಳೆದಂತೆಲ್ಲ ಸಾಹಿತ್ಯವೂ ಬೆಳೆಯ ಬೇಕು. ಹೊಸ ಕಾಲಕ್ಕೆ ತಕ್ಕಂತೆ ಹೊಸ ಅನುಭವಗಳಿಂದ ಕೂಡಿದ ಹೊಸ ಸಾಹಿತ್ಯವು ಹೊಸಬರಿಂದ ಹೊಸದಾಗಿ ಸೃಷ್ಟಿಯಾಗಬೇಕು. ಅಂದಿನ ಅಷ್ಟಾದಶವರ್ಣನೆಗಳು, ರಾಜರ ಕಥೆಗಳು, ದೇವರ ಪುರಾಣಗಳು ಇವೆಲ್ಲ ಇಂದು ನಮಗೆ ಏಕೆ? ನಮಗೀಗ ಹೊಸದು ಬೇಕು ಎಂದೆ.

ಅಂದಿನಿಂದ ನನ್ನ ದಾರಿ ಪ್ರಗತಿಪರವಾಯಿತು. ಕಾಡನ್ನು ಬಿಟ್ಟು ಊರಿಗೆ ಬಂದು ಜನ ಜಂಗುಳಿಯನ್ನು ಅರಿಯಲು ಮೊದಲು ಮಾಡಿದೆ. ಕೋಗಿಲೆ, ಕಮಲ ಕಲ್ಪ ವೃಕ್ಷಗಳಿಗೆ ಬದಲು ಕಾಗೆ, ಕೂಲಿ, ಕೋಕೋ ವೃಕ್ಷಗಳನ್ನು ವರ್ಣಿಸಲು ಯತ್ನಿಸಿದೆ. ಬೀದಿ ಬೀದಿ ಅಲೆದೆ. ಬಸ್ ಹತ್ತಿ ತಿರುಗಿದೆ. ಮಾರ್ಕೆಟ್ ಹಿಂದೆ ಕಾಳೆಮಾಳೆ ಆಡಿದೆ. ಪುಸ್ತಕ ಭಂಡಾರದಲ್ಲಿ ಬಿಡಾರ ಮಾಡಿದೆ. ಆಧುನಿಕರಂತೆ ಕಾವ್ಯ ಸ್ಫೂರ್ತಿಯನ್ನು ಪಡೆಯಲು ಸ್ವೇಚ್ಛೆಯಾಗಿ ಇರತೊಡಗಿದೆ. ಜೀವನದ ಸವಿ ನೋಡಿದೆ. ಸಿಗರೇಟು ಸೇದಿ, ಸಿನಿಮಾ ನೋಡಿ ಕಾಸು ಕಳೆದುಕೊಂಡೆ.

ಇಷ್ಟಾದರೂ ಕಾವ್ಯ ಕನ್ನಿಕೆ ಒಲಿಯಲಿಲ್ಲ. ಕಣ್ಣು ಮುಚ್ಚಿದರೂ ಇಲ್ಲ, ಕಣ್ಣುಬಿಟ್ಟರೂ ಇಲ್ಲ. ಕಾಡಾಯಿತು ಊರಾಯಿತು, ಜನರಾಯಿತು ಜನಾರ್ದನನಾಯಿತು. ಎಲ್ಲಿ ಹೋದರೂ ನನ್ನ ಗುರಿ ಸಾಧಿತವಾಗಲಿಲ್ಲ.

ಆದರೂ ಕವಿಯಾಗಬೇಕೆಂಬ ಬಯಕೆ ಮಾತ್ರ ನನ್ನಲ್ಲಿ ಎಳ್ಳಷ್ಟು ಕಡಿಮೆಯಾಗಲಿಲ್ಲ. ಕಾಲ ಹಾಗಿತ್ತು. ನನ್ನದು ಮಹಾ ಕವಿಗಳ ಕಾಲ. ಮಹಾ ಕಾವ್ಯ, ಮಹೋಪಮೆ, ಮಹಾ ರಗಳೆ ಇಂಥಾ ಅದ್ಭುತಗಳಿಗೇನೂ ಆಗ ಕಡಿಮೆ ಇರಲಿಲ್ಲ. ನೀಳ್ಗವನ, ಬೀಳ್ಗವನ, ಕೂಳ್ಗವನ, ಮೂರು ತಲೆಕಾಯಿನ ಬಾಳ್ಗವನ, ಎಂದು ಮುಂತಾಗಿ ಸಾಹಿತ್ಯ ವಿವಿಧ ರೂಪದಲ್ಲಿ ಮೂಡುತ್ತಿತ್ತು. ಮಲೆನಾಡಿನ ಕಾರ್ಮುಗಿಲೆಗಳ ಮೂಲೆ ಮೂಲೆಯಿಂದ, ಬಯಲು ಸೀಮೆಯ ಬೋಳ ಬಾವಿಗಳ ಅಂತರಾಳದಿಂದ ಕಾವ್ಯವಾಣಿ ಹೊಮ್ಮುತ್ತಿತ್ತು. ಕರೀ ಸಂತೆಯಲ್ಲಿ ಬಂದ ಬಿಳೀ ಕಾಗದದಿಂದ ಅಚ್ಚಾದ ಪುಸ್ತಕಗಳು ಧಾರಾಳವಾಗಿ ಬೆಳಕಿಗೆ ಬರುತ್ತಿದ್ದವು. ಎಂದಾದರೊಂದು

ದಿನ ನಾನೂ ಏನನ್ನಾದರೂ ಬರೆದು ಹೆಸರಾಂತ, ಕೀರ್ತಿವಂತ ಸಾಹಿತಿಯಾಗಬೇಕೆಂದು ನಾನು ಹಂಬಲಿಸತೊಡಗಿದೆ, ಕಾಲದ ಪ್ರವಾಹಕ್ಕೆ ಸಿಕ್ಕು.

ಒಂದು ಸಾರಿ ನನಗೆ ಅನುಕೂಲವಾದ ಸನ್ನಿವೇಶವೊಂದು ತಾನೇ ತಾನಾಗಿ ಒದಗಿ ಬಂತು. ದೊಡ್ಡದೊಂದು ಸಭೆ ಎಲ್ಲಿಯೋ ಯಾವ ಕಾರಣದಿಂದಲೋ ಸೇರಿದಾಗ ನಾನು ಮುನ್ನುಗ್ಗಿ ಸಭೆಯ ಮುಂದೆ ಉಗ್ರವಾದ ಭಾಷಣ ಮಾಡಿದೆ. ನವಯುಗದ ಸಾಹಿತ್ಯದ ರೂಪ ರೇಖೆಗಳನ್ನು ಕುರಿತು ಮಾತನಾಡುತ್ತ ಸಂಪ್ರದಾಯ ಶೀಲರಾದ ಮುದಿಯುವರನ್ನು ಬೈದು, ಪ್ರಗತಿಯನ್ನು ಎತ್ತಿ ಹಿಡಿದೆ. ರಷ್ಯಾ ನೋಡಿ ಎಂದೆ. ಉದಾಹರಣೆಗೆ ಫ್ರೆಂಚ್ ಸಾಹಿತ್ಯವನ್ನು ನೋಡಿ ಎಂದೆ. ಕಾಂಟಿನೆಂಟಲ್ ಲಿಟರೇಚರ್ ವಿಷಯವಾಗಿ ವಿಮರ್ಶಾ ಪೂರ್ಣವಾಗಿ ಮಾತನಾಡಿದೆ. ವಿಮರ್ಶೆ ಬೆಳೆಯಲಿ ಎಂದೆ. ಕಲೆ, ಕಾದಂಬರಿ, ಕಾರ್ಯಕ್ರಮ, ಯುವಕರ ಸ್ಫೂರ್ತಿ ಮೊದಲಾದ ಪದಗಳನ್ನು ವಿಪುಲವಾಗಿ ಬಳಸಿದೆ. ನಮ್ಮ ಸಾಹಿತ್ಯ ಇಂದು ಅಡ್ಡದಾರಿಗೆ ತಿರುಗಿ, ತೂಕಡಿಸುತ್ತ, ಹಳಸಿಹೋಗಿದೆಯೆಂದೂ, ಇಂದು ಯುವಕರು ಮುಂದೆ ಬಂದು ಸಾಹಿತ್ಯವನ್ನು ಪ್ರಗತಿಗೆ ತಂದು, ನವ ಚೈತನ್ಯವನ್ನು ತುಂಬಿ ಅದನ್ನು ಮತ್ತೆ ಬೆಳಸಬೇಕೆಂದು ಉಪದೇಶ ಮಾಡಿದೆ. ಜನ ನನ್ನ ಭಾಷಣವನ್ನು ಕೇಳಿ ತಬ್ಬಿಬ್ಬಾದರು. ಹುಡುಗರ ತಂಡಕ್ಕಂತೂ ಅಪರಿಮಿತ ಆನಂದವಾಯಿತು. ಮುದುಕರ ಮೂಗು ಮುರಿದು ಮಾತನಾಡಿದುದಕ್ಕಾಗಿ! ಎಲ್ಲರೂ ಕೈ ತಟ್ಟಿ, ಹಾರ ಹಾಕಿ ನನ್ನನ್ನು ಗೌರವಿಸಿದರು. ತಮ್ಮ ಭಾಷಣ ನಮ್ಮಲ್ಲಿ ಆಗಬೇಕು ಎಂದು ಕೆಲವರು ನಮ್ರರಾಗಿ ಬೇಡಿದರು. ಇನ್ನು ಕೆಲವರು "ನಿಮ್ಮ ಒಂದು ಹೂವನ್ನು ಕೊಡಿ ನಮ್ಮ ಮಾಲೆಯಲ್ಲಿ ಪೋಣಿಸುತ್ತೇವೆ" ಎಂದು ಕೇಳಿಕೊಂಡರು.

ಅಂತೂ ಅಂದು ರಾತ್ರಿ ಒಂಭತ್ತು ಗಂಟೆಗೆ ನನ್ನ ಕೀರ್ತಿರವಿಯ ಉದಯವಾಯಿತು.

ಭಾಷಣ ಮುಗಿಸಿಕೊಂಡು ಮನೆಗೆ ಬರುವಾಗ ಬಾಗಿಲಲ್ಲಿ, ಬಡ ಶರೀರದ, ಯುವಕರೆನಿಸಿಕೊಂಡ ಕೆಲವರು ಶಿಷ್ಯರು ನಿಂತು ನನ್ನನ್ನು

ನಾಯಕನನ್ನಾಗಿ ಸ್ವೀಕರಿಸಿ ಪ್ರಗತಿಯ ಸ್ಫೂರ್ತಿಯನ್ನು ಬೇಡಿದರು. ಅವರ ಹಾಸ್ಯ, ಅವರ ಕವನ ಕಲೆ, ಅವರ ನಾಟ್ಯ ನೈಪುಣ್ಯ ಇವೆಲ್ಲವನ್ನೂ ಕಂಡು ನನಗೆ ಪರಮಾಶ್ಚರ್ಯವಾಯಿತು. ಇಂಥಾ ಯುವಕರನ್ನು ಮುಂದೆ ತರುವುದಕ್ಕಾಗಿ ಅಂದಿನಿಂದಲೂ ಪ್ರಯತ್ನ ಮಾಡಲು ಪ್ರಾರಂಭಿಸಿದೆ.

ಹತ್ತಿರ ಕರ್ಣಾಟಕ, ಗುಡುಗು, ಛತ್ರದುರ್ಗ, ಖಾರಕಾಳು, ಹಡಪ, ಮೊದಲಾದ ಪ್ರಾಂತಗಳಲ್ಲಿ ನಾನೂ ಮತ್ತು ನನ್ನ ಗೆಳೆಯರು ಒಂದಾಗಿ ಪ್ರಗತಿಯ ಪ್ರಚಾರಮಾಡಿ ಅಲ್ಲಲ್ಲಿ ಸಂಘಗಳನ್ನು ಸ್ಥಾಪಿಸಿದೆವು. ಮತ್ತು ಕೇವಲ ಆರೆಂಟು ತಿಂಗಳುಗಳಲ್ಲಿಯೇ ನಮ್ಮ ಹತ್ತಾರು ಪುಸ್ತಕಗಳು ಅಚ್ಚಾದವು. ನಾವು ಹೇಳುವ ಪ್ರಗತಿಗೂ ನಮ್ಮ ಪುಸ್ತಕಗಳಿಗೂ ಯಾವ ಸಾಮ್ಯವೂ ಇಲ್ಲವೆಂತ ವಿಮರ್ಶಕರನೇಕರು ಬೈದರು. ಮಡಿಯುವರ ಮೈ ನವಿರೆದ್ದಿತು. ಪಕ್ಷ ಪ್ರತಿಪಕ್ಷದ ಬೈಗಳದ ಮಳೆಯಿಂದ ಪತ್ರಿಕೆಗಳೆಲ್ಲ ಒದ್ದೆಯಾದವು.

ಒಂದು ಕಡೆ ಯುವಕರ ಒತ್ತಾಯ, ಮತ್ತೊಂದುಕಡೆ ಪ್ರಕಾಶಕರ ಕಾಟ. ಮುಗುದೊಂದುಕಡೆ ಹೇಳಿದಂತೆ ಬರೆದು ತೋರಿಸುವ ಹಟ. ಈ ಮೂರು ಕಾರಣಗಳಿಂದ ಪ್ರೇರಿತನಾಗಿ ನಾನು ಲೇಖನಿ ಹಿಡಿದೆ. ನನ್ನದೂ ಕೂಡ ಹಲಗೆ ಬಳಪವ ಹಿಡಿಯದ ಅಗ್ಗಳಿಕೆಯೆ. ನಾನೂ ಇಟ್ಟ ಪದವನ್ನು ಅಳಿಸುತ್ತಿರಲಿಲ್ಲ. ಇಂಗ್ಲೀಷಿನಿಂದ ಹೊಸ ಭಾವಗಳನ್ನು ತಂದು ಬರೆಯ ತೊಡಗಿದೆ. ತಿಳಿಯದವರು ನನ್ನನ್ನು ಕೊಂಡಾಡಿದರು. ತಿಳಿದವರು ಕದ್ದ ಮಾಲೆಂದು ಹುಸಿನಕ್ಕು ಸುಮ್ಮನಾದರು. ಅದ್ಭುತ ಕಾದಂಬರಿಗಳನ್ನು ಬರೆದೆ. ಬಿಳಿಯ ಕಾಗದ. ದಪ್ಪ ರಟ್ಟು ಮೂರು ಬಣ್ಣದ ಮುಖ ಪತ್ರ, ಸಚಿತ್ರ. ಸುಮಾರು ಒಂದು ಸಾವಿರದ ಎರಡು ಪುಟಗಳು. ಸ್ವತಂತ್ರ ಸಮಾಜಿಕ ಎಂದು ಪ್ರಕಟನೆ ಮಾಡಿದ್ದರಿಂದ ನನ್ನ ಕಾದಂಬರಿಗಳು ಬೋಂಡ ಸಾಂಬಾರಿನಂತೆ ಖರ್ಚಾದವು. ವಿಮರ್ಶಕರಲ್ಲಿ ಕೆಲವರು ನನ್ನ ಪುಸ್ತಕಗಳನ್ನು ಸೀಳಿ ಸೀಳಿ ಪಲ್ಯ ಮಾಡಿದರೂ ಕೂಡ, ಪ್ರಕಾಶಕರನೇಕರು ನನ್ನ ಹತ್ತಿರ ಬಂದು "ಈಗೇಸ್ರಿ ಜನ ಜಾಣರಿದ್ದಾರೆ........ಕದ್ದು ಓದುತ್ತಿದ್ದವರು ಕೊಂಡು ಓದುತ್ತಿದ್ದಾರೆ. ಶೈಲಿನಲ್ಲಿ ಮಾತ್ರ ಓದುತ್ತಾರೆ. ಪುಸ್ತಕ ನೋಡುವುದಕ್ಕೆ ಚೆನ್ನಾಗಿದ್ದ

ರಾಯಿತು. ನೀವು ಬೇಕಾದಷ್ಟು ಬರೆಯಿರಿ. ನಾವು ಅಚ್ಚು ಮಾಡು ತ್ತೇವೆ" ಎಂದವರು ನನ್ನನ್ನು ಉತ್ಸಾಹಿಸಿದರು.

ಹೀಗೆ ನಾನು ಇಂದು ಹತ್ತು ಕಾದಂಬರಿಗಳು, ಕಥೆಗಳ ಸಂಕಲನ ಮೂರು, ಒಂಭತ್ತು ನಾಟಕಗಳು ಇತ್ಯಾದಿಯಾಗಿ ನಲವತ್ತೆರಡು ಗ್ರಂಥಗಳ ಪಿತೃವಾಗಿದ್ದೇನೆ. ಕೆಟ್ಟ ಕಾವ್ಯವನ್ನು ಬರೆದರೆ ಕೆಟ್ಟ ಮಗನನ್ನು ಪಡೆದಂತೆ ಕೆಡುಕಾಗುತ್ತದೆ ಎಂದು ಭಾಮಹ ಹೇಳಿದ್ದಾನಂತೆ. ಎಂಥಾ ಅಪಪ್ರಚಾರದ ಮಾತದು. ಕಾವ್ಯದಲ್ಲಿ ಒಳ್ಳೆಯದು ಎಂದರೇನು ಕೆಟ್ಟದು ಎಂದರೇನು? ಶೀಲ ಎಂದರೇನು ಅಶ್ಲೀಲ ಎಂದರೇನು? ಅಲ್ಲದೆ ಕಟ್ಟದು ಎಂದು ಹೇಳಲು ಇವರು ಯಾರು! ಇವರಿಗೆ ಕೆಟ್ಟರುವುದು ಮತ್ತೊಬ್ಬರಿಗೆ ಒಳ್ಳೆಯದಾಗಿರಬಹುದು. ಇವರ ಹೆದರಿಕೆಗೆ ಮರುಳಾಗಿ ಬರೆಯುವುದನ್ನು ನಾನೇಕೆ ನಿಲ್ಲಿಸಲಿ?

ಎಲೆಮರೆಯ ಕಾಯಂತೆ ಸ್ಥಾನದಿಂದ ನಾಡು, ನುಡಿ, ಗುಡಿ ಎಂದು ಇದ್ದಿದ್ದರೆ, ಗಂಭೀರವಾಗಿ ಎರಡು ಗ್ರಂಥ ಬರೆದಿದ್ದರೆ ಬಹುಶಃ ನಾನು ಸಾಯುವವರೆಗೂ ಜನ ನನ್ನನ್ನು ಕಾಣುತ್ತಿರಲಿಲ್ಲ. ಆದೇ ಈಗ ಬಿರುಸಾದ ಮುನ್ನುಡಿ, ಬಾಣದಂಥಾ ಭಾಷಣ, ಕೊಳ್ಳಿಯಂಥಾ ಕ್ರಾಂತಿ, ಇವುಗಳಿಂದ ಜನ ನನ್ನನ್ನು ಗುರುತಿಸಿದ್ದಾರೆ. ಬೈಯುವವರು ಸುಸ್ತಾಗಿ ತಣ್ಣಗಾಗಿದ್ದಾರೆ. ಹೊಗಳುವವರು ಹೊಗಳುತ್ತಲೇ ಇದ್ದಾರೆ. ಅವರು ಹೆಚ್ಚುತ್ತಿರುವವರೆಗೂ ನನಗೆ ಭಯವು ಎಳ್ಳಷ್ಟು ಇಲ್ಲ!



# ಯಜಮಾನರ ಕೆಲಸ

ಮೊನ್ನೆ ಸರಸಮ್ಮ ನಮ್ಮ ಮನೆಗೆ ಬಂದಾಗ ನಾನು ಮಾತಿನ ಮಧ್ಯೆ ಕೇಳಿದೆ "ಏನು ನಿಮ್ಮ ಯಜಮಾನರು ಯಾವ ಕೆಲಸದಲ್ಲಿ ಇದ್ದಾರೆ" ಎಂದು. ಹೆಂಗಸರು ತಮ್ಮ ತಮ್ಮಲ್ಲೇ ಮಾತನಾಡುವಾಗ ಅಡಿಗೆ, ಊಟ. ಸೀರೆ, ಕುಪ್ಪಸ, ಒಡವೆ, ವಸ್ತು ಇವುಗಳ ಪ್ರಸ್ತಾಪ ಮಾಡುತ್ತಾರೆ. ಗಂಡಸರು ತಮ್ಮ ಪರಸ್ಪರ ಸಂಬಳ ಸಾರಿಗೆ ಉದ್ಯೋಗ ಉದ್ಯಮಗಳ ವಿಚಾರ ಮಾಡುತ್ತಾರೆ. ಇದು ಸ್ವಾಭಾವಿಕ.

ಸರಸಮ್ಮ ನನ್ನ ಪ್ರಶ್ನೆಯನ್ನು ಕೇಳಿ ಸ್ವಲ್ಪ ತಲೆ ತಗ್ಗಿಸಿ ನಾಚಿ ಹೇಳಿದರು "ಅವರು ಆಫೀಸಿನಲ್ಲಿ ಕೆಲಸಮಾಡುತ್ತಾರೆ" ಎಂದು.

ಗುಂಡಣ್ಣ ಬಹಳ ಮೇಧಾವಿ. ಮೊದಲಿಂದಲೂ ಸಾಹಿತ್ಯ ಎಂದರೆ ಅವನಿಗೆ ಪಂಚಪ್ರಾಣ. ಜಾಣ. ಸಾಹಿತ್ಯದಲ್ಲಿ ವಿಶೇಷ ಪರಿಶ್ರಮ ಪಡೆದಿದ್ದರೂ ಇತರ ಎಲ್ಲ ಶಾಸ್ತ್ರಗಳ ವಿಚಾರವಾಗಿಯೂ ಸ್ವಲ್ಪ ಸ್ವಲ್ಪ ತಿಳಿದುಕೊಂಡಿದ್ದ. ನಾನು ಅವನು ಒಟ್ಟಿಗೆ ಎಂ.ಎ. ಪ್ಯಾಸು ಮಾಡಿದೆವು. ನಾನು ಕನ್ನಡ ಸಾಹಿತ್ಯವನ್ನು ವ್ಯಾಸಂಗಮಾಡಿದೆ. ಆತ ಇಂಗ್ಲಿಷ್ ವ್ಯಾಸಂಗಮಾಡಿದ. ಅಲ್ಲಿಯವರೆಗೂ ಒಟ್ಟಿಗೆ ಇದ್ದವರು ಆಗ ಅಗಲ ಬೇಕಾಯಿತು. ಗುಂಡಣ್ಣ ಲಾಯರ್ ಪರೀಕ್ಷೆ ಓದಲು ಹೊರಟುಹೋದ. ಅಲ್ಲಿಂದ ಅನೇಕ ವರ್ಷಗಳವರೆಗೆ ಗುಂಡಣ್ಣನ ವಿಚಾರವನ್ನು ಮೂರನೆಯವರ ಬಾಯಿಂದ ಕೇಳುತ್ತಿದ್ದೆನೇ ಹೊರತು ಅವನನ್ನು ನೋಡಲು ಆಗಿರಲಿಲ್ಲ. ಗುಂಡಣ್ಣ ಆಫೀಸಿನಲ್ಲಿ ಇದ್ದಾನಂತೆ. ಆಫೀಸಿನಲ್ಲಿ. ಇದೇ ಊರಿನಲ್ಲಿ. ಯಾವ ಆಫೀಸು? ಅಲ್ಲ ಲಾ ಪ್ಯಾಸು ಮಾಡಿದವನು ಲಾಯರಾಗುವುದು ಬಿಟ್ಟು ಗುಂಡಣ್ಣ ಆಫೀಸಿಗೆ ಏಕೆ ಸೇರಿದ? ಹೀಗೆ

ಅಂತ ನಾನು ಸರಸಮ್ಮನನ್ನ ಕೇಳಲಿಲ್ಲ. ಆಕೆಗೆ ಏನು ಗೊತ್ತಿರುತ್ತೆ ಪಾಪ. ಹೆಣ್ಣು ಹೆಂಗಸರು ಒಂದು ವೇಳೆ ಕೇಳಿದ್ದರೂ ಸಹ ಅಯ್ಯೋ ನಮಗೇನು ಗೊತ್ತಾಗುತ್ತೆ ಹೇಳಿ. ಈಗಿನ ಕಾಲದಲ್ಲಿ ಲಾಯರಿ ಮಾಡಿ ಬೋರ್ಡು ಹಾಕಿಕೊಂಡರೆ ಏನು ಮಹಾ ಉತ್ಪತ್ತಿ ಬಂದೀತು. ಮನೆಗೊಬ್ಬ ಲಾಯರುಗಳಾಗಿದ್ದಾರೆ. ಅದಕ್ಕಿಂತ ಸರ್ಕಾರಿ ಚಾಕರಿ ಎಂದರೆ ಎಷ್ಟೋ ಉತ್ತಮ" ಎಂದು ವಾದಿಸುತ್ತಿದ್ದರೋ ಏನೋ.

ಗುಂಡಣ್ಣ ದೊಡ್ಡ ಆಫೀಸಿನಲ್ಲಿ ಕೆಲಸದಲ್ಲಿದ್ದಾನೆ ಎಂದರೆ ಯಾರಿಗಾದರೂ ಸಂತೋಷವಾಗುವುದಿಲ್ಲವೆ. ಅವನನ್ನು ಮಾತನಾಡಿಸಿ, ಕಾಫಿ ತಿಂಡಿ ಗಿಟ್ಟಿಸಬೇಕು ಎಂದು ಒಂದು ಸಲ ಅವನ ಆಫೀಸಿನ ಕಡೆ ಹೊರಟೆ. ಗುಂಡಣ್ಣನ ಆಫೀಸು ಊರ ಹೊರಗೆ ಬಹು ದೂರದಲ್ಲಿದೆ. ಸುತ್ತಲೂ ಹಸಿರು ಜಮಖಾನೆಯನ್ನು ಹಾಸಿದಂತೆ ಬೆಳೆದಿರುವ ಹುಲ್ಲು, ಮರದ ತೋಪುಗಳು. ದಾರಿಯ ಎರಡು ಬದಿಯಲ್ಲೂ ಕಾಬಾಳೆಯ ಬಣ್ಣ ಬಣ್ಣದ ಹೂಗಳ ಉದ್ದಗಲವಾದ ಗಿಡಗಳು, ಇಂಥಾ ಪ್ರಕೃತಿ ಸೌಂದರ್ಯದ ಮಡಿಲಲ್ಲಿ ನಡು ಮಧ್ಯದಲ್ಲಿ ಕಚೇರಿಯ ಕಟ್ಟಡವಿದೆ. ಅದರ ಬಣ್ಣ ಕೆಂಪು. ಸಾಮಾನ್ಯವಾಗಿ ಸರ್ಕಾರಿ ಕಟ್ಟಡಗಳ ಬಣ್ಣವೆಲ್ಲ ಅದೇ. ಅದಕ್ಕೆ ಕಾರಣ ಏನೋ ತಿಳಿಯದು. ಪ್ರಾಯಶಃ ಕೆಂಪು ಭಯವನ್ನು ಸೂಚಿಸುತ್ತದೆ ಎಂದು ತಿಳಿಯುವ ಪಕ್ಷಕ್ಕೆ ಸರ್ಕಾರ ಎಂದರೆ ಜನ ಸ್ವಲ್ಪ ಹೆದರಲಿ ಎಂದೋ ಏನೋ ಕಟ್ಟಡಗಳಿಗೆ ಆ ಬಣ್ಣ ದೊರೆತಿರಬಹುದು. ಕಚೇರಿಯ ಹತ್ತಿರ ನಾನು ಹೋದಾಗ ಹನ್ನೊಂದು ಗಂಟೆ ಆಗಿದ್ದಿತು. ಸುತ್ತ ಮುತ್ತ ಜನರ ಓಡಾಟವೇ ಓಡಾಟ. ಕಾರಿನಲ್ಲಿ ಕೆಲವರು, ಜಟಕಾದಲ್ಲಿ ಕೆಲವರು, ಬೈಸಿಕಲ್ಲಿನ ಮೇಲೆ ಬಹಳ ಮಂದಿ, ನಡೆದು ಮುಕ್ಕಾಲು ಮೂರು ವೀಸ ಜನ–ಹೀಗೆ ಎಲ್ಲರೂ ಆಫೀಸಿನ ಹತ್ತಿರ ಸೇರುತ್ತಾರೆ. ಹನ್ನೊಂದರಿಂದ ಐದರವರೆಗೆ ಜೇನು ಗೂಡಿನ ನೊಣಗಳಂತೆ ಅವರು ಹೋಗುತ್ತಿರುತ್ತಾರೆ.

ನನಗೆ ಒಂದು ಕಷ್ಟ ಬಂತು. ಇಷ್ಟು ದೊಡ್ಡ ಆಫೀಸಿನಲ್ಲಿ ಗುಂಡಣ್ಣನನ್ನು ಹೇಗೆ ಪತ್ತೆ ಹಚ್ಚುವುದು ಎಂದು. ವಿಚಾರಮಾಡಿ ಹೆನ್ನೆರಡು ಗಂಟೆಯ ಹೊತ್ತಿಗೆ ಗುಂಡಣ್ಣನ ಗೂಡನ್ನು ಹುಡುಕಿದೆ. ಮತ್ತು ಭಯ ವಿಸ್ಮಯದಿಂದ ಗೂಡಿನಲ್ಲಿ ಕಾಲಿಟ್ಟೆ. ಒಳಗೆ ಹತ್ತು ಹನ್ನೆರಡು ಜನ

ಮೇಜುಗಳ ಮುಂದೆ ಕುಳಿತು ತಲೆ ತಗ್ಗಿಸಿಕೊಂಡು ಬರೆಯುತ್ತಿದ್ದರು. ಒಬ್ಬೊಬ್ಬರ ಮೇಜಿನ ಮೇಲೂ ಕಂತೆ ಕಂತೆಯಾಗಿ ಕಾಗದಗಳಿದ್ದುವು ಅವುಗಳನ್ನೆಲ್ಲ ಅವರು ಬರೆದು ತೀರಿಸಬೇಕಾಗಿತ್ತೆಂದು ಕಾಣುತ್ತದೆ. ಗುಮಾಸ್ತರಿಗೆ ಕ್ಲಾರ್ಕ್ ಎಂಬ ಹೆಸರು ಬಂದುದು ಇತ್ತೀಚೆಗೆ. ಮೊದಲು ಅವರನ್ನು ರೈಟರುಗಳು ಎಂತಲೇ ಕರೆಯುತ್ತಿದ್ದರು. ಅವರ ಕೆಲಸ ನಿಜವಾಗಿಯೂ ರೈಟರ್‌ಗಿರಿಯೆ!

ಅಷ್ಟರಲ್ಲಿ ಯಾರೋ ಒಬ್ಬರು ವ್ಯಂಗ್ಯ ಮತ್ತು ಹಾಸ್ಯದ ದನಿಯಿಂದ "ಏನ್ರಿ ಲಾ ಪ್ಯಾಸುಮಾಡಿದರೂ ಲೆಟರ್ ಡಿಸ್ಪ್ಯಾಚ್ ಮಾಡೋಕೇ ಬರೋಲ್ಲೇನ್ರಿ? ಹಾಕ್ರಿ ಅರ್ಜಿಗೂ ಒಂದು ನಂಬ್ರು, ಆರ್ಡರಿಗೂ ಒಂದು ನಂಬ್ರು" ಎಂದು ಕೂಗಿದರು. ಅವರು ಯಾವ ವಿಚಾರವಾಗಿ ಆ ಮಾತನ್ನಂದರೋ ಅವರ ಕಡೆ ಎಲ್ಲ ಗುಮಾಸ್ತರೂ ತಿರುಗಿ ಮುಗುಳುನಗೆ ನಕ್ಕರು. ನಾನೂ ಆ ಕಡೆ ತಿರುಗಿ ನೋಡಿದೆ. ಅಲ್ಲಿ ಕುಳಿತಿದ್ದ ಗೆಳೆಯ ಗುಂಡೂರಾಯ, ಫೈಲುಗಳ ಮಧ್ಯೆ ಹುದುಗಿ ಫೈಲ್ವಾನನಂತೆ–ಅವನ ಎಡಗಡೆ ಫೈಲು, ಅವನ ಬಲಗಡೆ ಫೈಲು ಅವನ ಮುಂಗಡೆ ಫೈಲು. ಅಷ್ಟು ಫೈಲುಗಳ ಮಧ್ಯೆ ಅವನೇ ಇಲ್ಲವಾಗಿದ್ದ.

ನನ್ನ ಕಂಡ ಕೂಡಲೇ ಗುಂಡಣ್ಣ ಎದ್ದು ನಮಸ್ಕಾರಮಾಡಿ ಕೋಟಿನ ಗುಂಡಿ ಸರಿಮಾಡಿಕೊಳ್ಳುತ್ತ ತನ್ನ ಪಕ್ಕದ ಕುರ್ಚಿಯಲ್ಲಿ ಕೂಡ ಹೇಳಿದ. ಅವನು ಮಾತನಾಡಿದ್ದು ಅವನಿಗೇ ಕೇಳದಷ್ಟು ಅವನ ದನಿ ಮೃದುವಾಗಿತ್ತು. ಸ್ವಲ್ಪ ಗಟ್ಟಿಯಾಗಿ ಮಾತನಾಡಬಾರದೇಕೆ ಎಂದು ನಾನು ಕೇಳಿದರೆ ಗುಂಡಣ್ಣ ಹೇಳಿದ, ಪಕ್ಕದಲ್ಲಿಯೇ ಅಫೀಸರಿದ್ದಾರೆ. ಗುಮಾಸ್ತೆಯ ಮಾತು ಆಫೀಸರ ಕಿವಿಗೆ ಬೀಳಬಾರದು. ರೂಪ ಕಣ್ಣಿಗೆ ಬೀಳಬಾರದು. ಫೈಲ ಮರೆಯ ಫೈಲ್ವಾನ, ಕಾಗದದ ಮರೆಯ ಕಾರಕೂನ, ನಮ್ಮ ಗುಮಾಸ್ತ. ಬಿದ್ದರೆ ಸಾಹೇಬರ ಕಾಲಿಗೆ ಬೀಳ ಬಹುದು ಅಷ್ಟೆ.

"ಏನು ಗುಂಡಣ್ಣ ಲಾಯರ್ ಆಗ್ತೀಯಾ ಅಂತ ಮಾಡಿದ್ದೆ. ಅದು ಬಿಟ್ಟು ಈ ಕೆಲಸಕ್ಕೆ ಬಂದೆಯಾ" ಎಂದು ನಾನು ಕೇಳಿದೆ.

ಗುಂಡಣ್ಣ ದೈನ್ಯದಿಂದ ತನ್ನ ಗುಮಾಸ್ತೆಗಿರಿಯ ವಿಷಯವನ್ನೆಲ್ಲ

ವಿವರಿಸಿ ಹೇಳಿದ. ಸರ್ಕಾರಿ ಕೆಲಸ ಎಂದರೆ ಸ್ವಲ್ಪ ಸೆಕ್ಯೂರಿಟಿ. ಸಂಬಳ ಕಡಿಮೆಯಾದರೂ ಸರಿಯಾಗಿ ಬರುತ್ತೆ. ಮುದುಕನಾದ ಮೇಲೆ ಪೆನ್ಷನ್ ಸಿದ್ಧ. (ಗುಂಡಣ್ಣನಿಗೆ ಜೀವನದ ಪ್ರಾರಂಭದಲ್ಲಿಯೇ ಮುದುಕನಾಗುವ ಯೋಚನೆ) ಹೀಗಿರುವಾಗ ಲಾಯರಿಯ ದಿನ ದಿನದ ಪರದಾಟಕ್ಕಿಂತ ಸರ್ಕಾರಿ ನೌಕರಿ ಸರಿಯಾದುದು ಎಂದು ಗುಂಡಣ್ಣ ಗುಮಾಸ್ತನಾದ. ನೌಕರಿಗೆ ಸೇರುವಾಗ ಇದ್ದ ಉತ್ಸಾಹ ಸೇರಿದ ಮೇಲೆ ಎರಡು ದಿನವೂ ಅವನಲ್ಲಿ ಉಳಿಯಲಿಲ್ಲ. ಕಾಲೇಜಿನಲ್ಲಿ ಕುಣಿದಾಡಿಕೊಂಡಿದ್ದವನನ್ನು ತಂದು ಹನ್ನೊಂದರಿಂದ ಐದರವರೆಗೆ ಕೂತಿರು ಅಂದಾಗ ಗುಂಡಣ್ಣ ಬೆಚ್ಚಿಬಿದ್ದ. ಭಗ ಭಗ ಎಂದು ಮೈಯಲ್ಲೆಲ್ಲ ಬೆಂಕಿ ಇಟ್ಟಂತಾಗುತ್ತಿತ್ತು ಅವನಿಗೆ. ಮೊದಲು ದಿನವೇ ಆಫೀಸಿನಲ್ಲಿ ತೂಕಡಿಸಿದ. ನಂಬರ್ ಹಾಕು ಗುಂಡಣ್ಣ ಅಂದಾಗ ನಾನೇ ಹಾಕ್ಬೇಕೇ ಎಂದು ಎದುರುವಾದಿಸಿದ. ಕಾಗದಗಳನ್ನು ರವಾನಿಸುವಾಗ ಬೆಂಗಳೂರಿನವರದನ್ನು ಮಂಗಳೂರಿಗೂ ಮಂಗಳೂರಿನವರದನ್ನು ಮಡಕೇರಿಗೂ ಕಳಿಸಿದ. ಕಾಗದಕ್ಕೆಲ್ಲ ತಪ್ಪು ನಂಬರ್ ಎಳದ. ಡಿ.ಸಿ.ಗೆ ಆರ್.ಸಿ. ಕಾಗದ ಕಳುಹಿಸಿದ. ನಿನ್ನೆ ಕೆಲಸ ಇವತ್ತು, ಇವತ್ತಿನದು ನಾಳೆ ಎಂದು ವಿಳಂಬ ಮಾಡಿದ. ಮೂರು ದಿನದ ಚಾಕರಿಯಲ್ಲಿ ಎರಡು ದಿನ ಸಿ.ಎಲ್., ತಗೊಂಡ. ಅಂತೂ ಅನೂಚೀನವಾಗಿ ಬಂದ ಆಫೀಸಿನ ಅಧ್ವಾನಕ್ಕೆ ತಾನೂ ತನ್ನ ಅಲ್ಪ ಕಾಣಿಕೆಯನ್ನು ಸಲ್ಲಿಸಿ ಕೃತಕೃತ್ಯನಾದ.

"ಓ ಹೋ ಅದಕ್ಕೇನೋ ಆ ಮುದುಕರು ನಿನ್ನ ಹಂಗಿಸ್ತಾ ಇದ್ದಿದ್ದು" ಅಂದೆ.

ಹಂಗಿಸಿದವರು ನಾನ್‌ಗ್ರಾಜುಏಟಂತೆ. ವಿದ್ಯಾಧಿಕರಲ್ಲದ ಗುಮಾಸ್ತರಲ್ಲೆಲ್ಲಾ ಇದೊಂದು ಭಾವನೆ ಇದ್ದಂತೆ ಕಾಣುತ್ತದೆ. ಹೊಸದಾಗಿ ಬಂದ ಸೊಸೆಯನ್ನು ಅತ್ತೆ ಮೂದಲಿಸುವಂತೆ ಹೊಸದಾಗಿ ಬಂದ ಗ್ರಾಜುಏಟಗಳನ್ನು ಹಂಗಿಸಿ ಮಾತನಾಡುತ್ತಾರೆ. ತಮಗಿಂತ ಅವರು ಏನೂ ಮೇಲಲ್ಲ ಎಂದು ಹೇಳುತ್ತ ಡಂಗುರ ಹೊಡೆಯುತ್ತಾರೆ. ನಾಲ್ಕು ದಿನ ಆಗಿ ಆಫೀಸಿನ ಕೆಲಸ ಮಾಹಿತಿಯಾಗಿಬಿಟ್ಟರೆ ಅಲ್ಲಿನ ಕೆಲಸದಲ್ಲಿ ಅರ್ಧ ಭಾಗವೆಲ್ಲ ಮಕ್ಕಿಕಾ ಮಕ್ಕಿ ಎಂದು ಯಾರಿಗಾದರೂ ಗೊತ್ತಾಗುತ್ತದೆ.

ಅಷ್ಟರಲ್ಲಿ ಈ ಮುದುಕರು ತಮ್ಮ ಬಾಯಿ ಚಪಲವನ್ನು ತೀರಿಸಿಕೊಂಡು ಬಿಡುತ್ತಾರೆ. ಒಂದು ಕಡೆ ಆಫೀಸರು–ಕ್ಲಾರ್ಕು ಇವರ ತಿಕ್ಕಾಟ. ಇನ್ನೊಂದು ಕಡೆ ವಿದ್ಯಾಧರ ಮತ್ತು ವಿದ್ಯಾಧರರಲ್ಲದವರ ಜಗಳ, ಮೇಲಾಗಿ ಜಾತಿ, ವಯಸ್ಸು, ಮಾಹಿತಿ ಎಂಬ ಹೆಸರಿನಲ್ಲಿ ಕಸಿವಸಿ, ಹೀಗೆ ಆಫೀಸಿನಲ್ಲಿ ಶಾಂತಿ ಎಂದೂ ನೆಲಸಿರಲಾರದು.

"ಏನು ಗುಂಡಣ್ಣ ನಮ್ಮ ಆದರ್ಶಗಳೆಲ್ಲ ಎಷ್ಟು ಬೇಗ ಮಾಯ ವಾಗುತ್ತವೆ ನೋಡು." ಎಂದು ಲೋಕಾಭಿರಾಮವಾಗಿ ಅಂದೆ.

ಹೊಸದರಲ್ಲೀನೋ ಗುಂಡಣ್ಣ ಬಹಳ ಗಡಸಿನಿಂದಲೇ ಇದ್ದ. ಕಾಲೇಜಿನಿಂದ ಆಗತಾನೇ ಹೊರಬಿದ್ದು ಬಂದವನಾದುದರಿಂದ ಅವನ ರಕ್ತ ಕೆಂಪಗಿತ್ತು, ಬಿಸಿಯಾಗಿತ್ತು. ಅವನಿಗೆ ಅನಿಸುತ್ತಿತ್ತು ಗುಮಾಸ್ತೆಯ ಬಾಳಿಗಿಂತ ಗಾರೆ ಅರೆದು ಜೀವನಮಾಡುವುದು ಮೇಲು ಎಂದು. ರೈತರಿ ಗಾದರೆ ಅವರ ಉದ್ಧಾರಕ್ಕಾಗಿ ಸರ್ಕಾರವಿದೆ, ಇತರ ಸಂಸ್ಥೆಗಳಿವೆ. ಹಿಂದುಳಿದವರಿಗೆ ಮುಂದೆ ಬರಲು ಬಹುವಿಧ ಮಾರ್ಗಗಳಿವೆ. ಆದರೆ ಗುಮಾಸ್ತನಿಗೆ ಯಾವ ದಾರಿಯೂ ಇಲ್ಲ. ಅವನೊಬ್ಬ ದುಡಿಯುವ ಎತ್ತು. ರೈತನಂತೆಯೇ ಅವನೂ ಬಡವನಲ್ಲವೇ? ರೈತನು ಹೇಗೆ ಜನತೆಯ ಬನ್ನು ಮೂಳೆಯೋ ಗುಮಾಸ್ತನು ಹಾಗೆ ಸರ್ಕಾರದ ಅಡಿಗಲ್ಲ ಲ್ಲವೆ? ಅವನ ಪಾಡನ್ನು ಉತ್ತಮಪಡಿಸಲು ಯಾರು ಪ್ರಯತ್ನಿಸಿದ್ದಾರೆ? ಯುದ್ಧದಿಂದ ಜನವೆಲ್ಲ ಲಾಭ ಪಡೆದು ಖುಷಿಪಡುತ್ತಿರುವಾಗ ಪ್ರಾಣ ಬಿಟ್ಟವನು ಬಡ ಗುಮಾಸ್ತ. ಅವನ ಸಂಬಳ ಸಾರಿಗೆಯನ್ನು ಸರಕಾರ ಸಾಕಷ್ಟು ಹೆಚ್ಚುಮಾಡಲಿಲ್ಲ. ಇವನ್ನೆಲ್ಲ ನೆನೆದಾಗ ಗುಂಡಣ್ಣನ ಮನಸ್ಸು ಮಥಿತವಾಗುತ್ತಿತ್ತು. ಕಾಲು ಕಚೇರಿಯ ಕಡೆ ತಿರುಗಿದಾಗಲೆಲ್ಲ ರಾಜೀ ನಾಮೆ ಕೊಡುವ ವಿಚಾರ ಅವನಿಗೆ ಬರುತ್ತಿತ್ತು. ರಾಜೀನಾಮೆ ಕೊಡುವುದರಿಂದ ಬಡವನ ಸಿಟ್ಟು ದವಡೆಗೆ ಮೂಲವಾಗುತ್ತದೆ ಅಷ್ಟೆ. ಅದಕ್ಕೆ ಬದಲು ಗುಮಾಸ್ತರೆಲ್ಲ ಕೆಲಸಮಾಡುವುದಿಲ್ಲವೆಂದು ಮುಷ್ಕರ ಹೂಡಬೇಕು,–ಹೂಡಬೇಕು. ತಾನೊಬ್ಬ ನಾಳೆಯಿಂದಲೇ ಹೂಡಬಲ್ಲ. ಆದರೆ ಇತರರು! ಗುಮಾಸ್ತ ಇಂದು ಆತ್ಮಗೌರವ, ಸ್ವಯಂಪ್ರಭೆ, ಧೈರ್ಯ ಎಲ್ಲವನ್ನೂ ಕಳೆದುಕೊಂಡಿದ್ದಾನೆ. ಎಲ್ಲರೂ ರಸ್ತೆಯಲ್ಲಿ ಹೇಳುವ

ಮಾಡುವ ಕೆಲಸವನ್ನು ಇವನು ಮನೆಯಲ್ಲಿ ಆಡಲಾರ ಮಾಡಲಾರ. ಹೀಗೆಂದುಕೊಂಡು ಸಂಜೆ ಮತ್ತೆ ಗುಂಡಣ್ಣ ಹಲ್ಲು ಕಳೆದ ಹಾವಿನಂತೆ ಹಿಂತಿರುಗುತ್ತಿದ್ದ.

ಮಾತು ಹೀಗೆ ನಿಧಾನವಾಗಿ ಬೆಳೆಯುತ್ತಿರುವಾಗ ಗುಂಡಣ್ಣ ಗಡಿಯಾರದ ಕಡೆ ಕೈ ತೋರಿಸಿ "ಎರಡೂವರೆ ಆಯಿತಪ್ಪ. ಏಳು ಇಷ್ಟು ಕಾಫಿಗೆ ಹೋಗಿ ಬರೋಣ" ಎಂದ. ನಾನು ಬಂದದ್ದು ಅದೇ ಉದ್ದೇಶದಿಂದಲಾದರೂ ಗುಂಡಣ್ಣನ ಆಫೀಸನ್ನು ನೋಡಿದ ಮೇಲೆ ನನಗೆ ಕಾಫಿ ಬೇಡವಾಗಿತ್ತು. ಆದರೂ ಸ್ನೇಹಿತನ ಮಾತಿಗಾಗಿ ಹೊರಟು ನಿಂತೆ.

ದಾರಿಯಲ್ಲಿ ಗುಂಡಣ್ಣ ಹೇಳಿದ "ಏನೋಪ್ಪ. ಮನುಷ್ಯ ಬಯಸಿದ್ದೆಲ್ಲ ಸಿಗುತ್ತೆಯೆ ಹೇಳು. ನಮಗೆ ಬೇಕಾದ ಕೆಲಸವನ್ನು ಕೇಳಿದಷ್ಟು ಸಂಬಳವನ್ನು ಯಾರು ಕರೆದು ಕೊಡುತ್ತಾರೆ ಹೇಳು. ಸಿಕ್ಕಿದ್ದರಲ್ಲೇ ತೃಪ್ತಿಪಟ್ಟುಕೊಳ್ಳಬೇಕು" ಎಂದು ತನ್ನ ಉಚ್ಚ್ವೆಯ ಅಭಿಪ್ರಾಯವನ್ನು ವ್ಯಕ್ತಪಡಿಸಿದ. ಮತ್ತೆ ನಾನು ಸ್ವತಂತ್ರನಾಗಿರುವುದನ್ನು ಕಂಡು ಮೆಚ್ಚಿಗೆಯನ್ನು ಸೂಚಿಸಿದ. ಜೋಳದ ಹಿಟ್ಟಿನ ಉಪ್ಪಿಟ್ಟು, ಅದು ಏತರದ್ದೋ ವಡೆ, ತಿಳಿನೀರಿನ, ಬೆಲ್ಲದ ಆರಿದ ಕಾಫಿ ಇವನ್ನು ಸೇವಿಸಿ – ಸಿಕ್ಕಿದ್ದರಲ್ಲೇ ತೃಪ್ತಿಪಟ್ಟುಕೊಂಡು ಮನೆಗೆ ಹೊರಡಲು ಅನುವಾದೆ.

ಹೊರಟಾಗ ಗುಂಡಣ್ಣ ಕಡೆಯ ಮಾತೋ ಎನ್ನುವಂತೆ "ನೋಡಪ್ಪ. ಇವರು ಕೊಡುವ ಸಂಬಳವೆಲ್ಲ ಕಾಫೀಗೆ ಸಾಕೋ ಸಾಲದೋ ಆಗುತ್ತೆ" ಎಂದ.

ಮನೆಗೆ ಹೋಗುವಾಗ ದಾರಿಯಲ್ಲಿ ಅದೇನೇನೋ ಯೋಚನೆಗಳು ತಂಡ ತಂಡವಾಗಿ ಬಂದವು. ಗುಮಾಸ್ತರ ಗೋಳಿನ ಬಾಳನ್ನು ಸರಿಪಡಿಸಲು ಸರ್ಕಾರದವರು ಈ ಕೂಡಲೇ ಕರ್ತವ್ಯನಿಷ್ಠರಾಗಬೇಕೆಂದು ಒಂದು ಉಗ್ರಲೇಖನ ಬರೆಯುವ ಮನಸ್ಸಾಯಿತು. ಆ ಶಕ್ತಿ ಆ ಧೈರ್ಯ ನನ್ನಲ್ಲಿ ಇನ್ನೂ ಇತ್ತು. ಒಬ್ಬ ಎಲೆ ಮಾರುವವನು–ಬೇಕಾದರೆ ತಕೋ ಬೇಡದೇ ಇದ್ದರೆ ಬಿಡು – ಎಂದು ಕತ್ತರಿಸಿದಂತೆ ಮಾತನಾಡುತ್ತಾನೆ. ಸ್ವತಂತ್ರವಾಗಿ ಜೀವನ ಮಾಡುವವರಿಗೆ ಆ ಶಕ್ತಿ ಇರುತ್ತದೆ. ನಿಜ. ಸ್ವತಂತ್ರ ಜೀವನ ಲಾಟರಿ ಇದ್ದ ಹಾಗೆ. ಅದರಲ್ಲಿ ಆಕಸ್ಮಿಕಗಳು ಹೆಚ್ಚು,

ಗುಮಾಸ್ತರ ಜೀವನದಲ್ಲಿ ಗ್ಯಾರಂಟಿ ಉಂಟು, ಆದರೆ ಗೌರವ ಇಲ್ಲವಲ್ಲ- ಎಷ್ಟು ಜನ ಈ ಗಾಣಕ್ಕೆ ಸಿಕ್ಕು ಎತ್ತುಗಳಂತೆ ದುಡಿದು ದುಡಿದು............

— ೨ —

ಕೆಲ ವರ್ಷಗಳು ಕಳೆದು ಹೋದುವು. ಆರೋ ಏಳೋ ಅಥವಾ ಎಂಟೋ ಖಚಿತವಾಗಿ ನೆನಪಿಗೆ ಬರುವಂತಿಲ್ಲ. ಚೆನ್ನಾಗಿ ನಿದ್ದೆ ಬಂದವನು ಬೆಳಗ್ಗೆ ಮಲಗಿ ರಾತ್ರಿಯವರೆಗೂ ನಿದ್ದೆಮಾಡಿ ಎದ್ದು ಕಣ್ಣುಜ್ಜಿಕೊಳ್ಳುತ್ತಾ ತಾನು ಎಲ್ಲಿದ್ದೇನೆಂದು ಕೇಳುವಂತೆ ನಾನು ಭ್ರಮಿತನಾಗಿದ್ದೆ. ಜೀವನದ ಬಹು ಭಾಗವಲ್ಲ, ಬಹು ಮುಖ್ಯ ಭಾಗವೆಲ್ಲ ಆಗಲೇ ಕಳೆದು ಹೋಗಿತ್ತು. ಅದರ ಅರಿವು ಸಹ ನಮಗಾಗಲಿಲ್ಲ. ಹಿಂದಿನ ಕಾಲ, ಹಿಂದಿನ ಜನ, ಹಿಂದಿನಸುಖ ಎಲ್ಲವನ್ನೂ ನೆನೆದು ಹಿಗ್ಗುವ ಬರ ಬಂದಿತ್ತು ಊರ ಅಷ್ಟಗಲವಾಗಿ. ಕಾಲೇಜು ಜೀವನ ನೆನಪಾಯಿತು. ದಿನಕ್ಕೆ ಎರಡು ಸುಖವಾದ ಊಟ ವಿದ್ಯಾರ್ಥಿ ಭವನದ ದೋಸೆಗಳು, ವಾರಕ್ಕೆ ಎರಡು ಇಂಗ್ಲಿಷ್ ಸಿನಿಮಾ – ಗುಂಡಣ್ಣ ನಾನು ಜೊತೆಯಾಗಿ ಕುಣಿದ ದಿನಗಳವು.

ಮೊನ್ನೆ ಸರಸಮ್ಮ ನನ್ನ ಕಂಡಾಗ ಯಜಮಾನರು ಹೇಗಿದ್ದಾರೆ ಎಂದು ಕೇಳಿದರೆ ಅವರು "ಅಯ್ಯೋ ಅವರಿಗೆ ಅದೇನು ಆಫೀಸಿನ ಹುಚ್ಚು ಹಿಡಿದು ಬಿಟ್ಟಿದೆ ಅಂತೀರಿ. ಅರ್ಧ ಗಂಟೆ ಮನೆ, ಆರುಗಂಟೆ ಆಫೀಸು ಅಂತ ಅನ್ನುತ್ತಾರೆ. ಅದೇನು ಕೆಲಸವೋ ಕಾರ್ಯ ಭಾರವೋ ದೇವರಿಗೇ ಗೊತ್ತು. ಕಚೇರಿಯಿಂದ ಬರುವಾಗಲೂ ಲೆಕ್ಕ ಪತ್ರದ ಕಂತೆಯನ್ನು ಮನೆಗೆ ತರುತ್ತಾರೆ. ರಾತ್ರಿ ಓದುತ್ತಾರೆ. ಹಗಲು ಬರೆಯುತ್ತಾರೆ. ಇವರ ಕೆಲಸದ ಮಧ್ಯ ನನಗೆ ಬೇಸರವಾಗಿ ಹೋಗಿದೆ" ಎಂದು ಪ್ರಾರಂಭಿಸಿದರು.

ನನಗೆ ಆಗಲೇ ನನ್ನ ಕೆಲಸ ಬೇಸರವಾಗಿದೆ. ಯಾವ ಹೊಸ ಉದ್ಯಮದಲ್ಲೂ ನನ್ನ ಬುದ್ಧಿ ಓಡದು, ಯಾರಾದರೂ ಕೊಡುವವನಿದ್ದರೆ ಹಾಯಾಗಿ ಉಂಡು ಮಲಗುವ ಆಶೆಯಾಗುತ್ತಿದೆ. ಅಂಥದರಲ್ಲಿ ಗುಂಡಣ್ಣ ತಾನೇ ಜುಗುಪ್ಸೆಪಡುತ್ತಿದ್ದ ಆಫೀಸನ್ನು ತಾನೇ ಬಲವಾಗಿ ಹಿಡಿದನೆ?

"ಗಂಡಸರು. ದೊಡ್ಡ ಆಫೀಸಿನಲ್ಲಿದ್ದಾರೆ. ಕೆಲಸ ಮಾಡಲಿ ಬಿಡಿ. ನಾಲ್ಕು ಕಾಸು ಹೆಚ್ಚಾಗಿ ಬರುತ್ತೆ" ಅಂದೆ.

ಅದಕ್ಕೆ ಸರಸಮ್ಮ ನಿರ್ವೇದಭಾವದಿಂದ “ಯಾರಿಗ್ರೀ ಬೇಕು ದುಡ್ಡು ಕಾಸು. ಇರೋದೇ ಸಾಕಾಗಿದೆ. ಸರ್ಕಾರಿ ನೌಕರಿ ಅಂದರೆ ಸಂಸಾರ ಬಿಡಬೇಕು ಅಂತ ಅರ್ಥವೇ? ಇವರು ಹೀಗೆ ಮಾಡ್ತಾ ಇದ್ರೆ ಅಪ್ಪನ ಮನೆಗಾದ್ರೂ ನಾಲ್ಕು ದಿನ ಹೋಗೋಣ ಅಂತಿದೀನಿ,” ಎಂದರು. ಅವರ ಮಾತಿನಲ್ಲಿ ಔದಾಸೀನ್ಯ ಸ್ಪಷ್ಟವೇ ಇದ್ದು, ಗಂಡನಲ್ಲಿರುವ ಭಕ್ತಿ ವಿಶ್ವಾಸಗಳೇ ಎದ್ದು ಕಾಣುತ್ತಿದ್ದುವು.

ಅಂತೂ ನಾನು ನೋಡಿದ್ದರಲ್ಲಿ ಈಗ ಗುಂಡಣ್ಣನ ಬಣ್ಣ ಬದಲಾಯಿಸಿದೆ. ಮಾಡಿದರೆ ಮಾತಾಡೊಲ್ಲ ತಪ್ಪಿದರೆ ತಲೆಯ ಮೇಲೆ ಮಡಗುತ್ತಾರೆ ಎಂದು ಗೋಗರೆಯುತ್ತಿದ್ದ ಗುಂಡಣ್ಣ, ಇಂದು ಹಗಲು ಹನ್ನೆರಡು ಗಂಟೆಯೂ ಆಫೀಸಿನಲ್ಲೇ ಬಿದ್ದು ಸಾಯುತ್ತಿರುತ್ತಾನೆ. ಅರಳು ಮರುಳಾದರೂ ಆಫೀಸಿನ ವಿದ್ಯಮಾನವನ್ನೇ ಕುರಿತು ಮಾತಾಡುತ್ತಿರುವುದು ಅವನ ಸ್ವಭಾವವಾಗಿದೆ. ಬರೀ ಪೇಟವಿದ್ದ ಜಾಗದಲ್ಲಿ ಈಗ ಒಂದು ಜರೀ ಪೇಟ ಬಂದಿದೆ. ಕುರ್ಚಿಯ ತುಂಬ ಕೂರುತ್ತಾನೆ. ಕೂತು ತೂಗಾಡುತ್ತಾನೆ. ಕಮ್ಯಾಂಡ್ ಮಾಡುತ್ತಾನೆ. ಮಾತೆತ್ತಿದರೆ ಸಬ್‌ಮಿಟ ಪುಟಪ್ಪು, ಪೆರೂಸಲ್ಲು, ಆರ್ಡರ್ಸುರ್ ಎಂಬ ಪದಗಳನ್ನೇ ಪ್ರಯೋಗ ಮಾಡುತ್ತಾನೆ. ಗುಂಡಣ್ಣ ಈ ಸಾರಿ ಸೊಗಸಾದ ಟಿಫನ್ ಮಾಡಿಸಿದ. ಸ್ಪೆಷಲ್ ಕಾಫಿ ತರಿಸಿಕೊಟ್ಟ. ಸರ್ಕಾರಿ ಚಾಕರಿಯನ್ನು ಕುರಿತು ಒಂದು ಭಾಷಣವನ್ನೇ ಮಾಡಿದ. “ನೋಡು ಮೊದಲು ಮೊದಲು ಆಫೀಸ್ ಎಂದರೆ ಮೈ ಬೆವರುತ್ತಿತ್ತು. ಕತ್ತೆಯಂತೆ ಹೊತ್ತ ಬಟ್ಟೆಯನ್ನೇ ಹೊರಬೇಕೆ? ದಿನಾ ಮಾಡಿದ್ದೆ ಕೆಲಸ. ಅದನ್ನು ಮತ್ತೆ ಮತ್ತೆ ಮಾಡಿದ್ದೂ ಮಾಡಿದ್ದೆ. ಜೀವಮಾನವೆಲ್ಲ ಅದೆಯೆ. ಕೂಲಿಯವನಿಗೂ ನಮಗೂ ಏನು ಭೇದ ಹೇಳು. ಇಂಥಾ ಕೆಲಸಕ್ಕೆ ಗ್ರಾಜುಏಟುಗಳು ಬೇಕೆ? ಎಂದೆಲ್ಲಾ ನನ್ನ ಮನಸ್ಸು ಕೆಟ್ಟು ಯೋಚಿಸುತ್ತಿತ್ತು. ಇದೆಲ್ಲ ಕೇವಲ ಎರಡು ದಿನದ ಸೆಂಟಿಮೆಂಟ್ಸು ಅಷ್ಟೆ. ಸ್ವಾತಂತ್ರ್ಯ, ದೇಶ, ದೇವರು ಸತ್ಯ ಅಂತ ಕೂಗಾಡುತ್ತೇವಲ್ಲ ಅದೆಲ್ಲ ಯಾರಿಗೆ? ಬಿಡಿ ಸನ್ಯಾಸಿ ಹಾಗೆ ಅಲೀತಾ ಇರುತ್ತಾನಲ್ಲ ಅವನಿಗೆ. ಸಂಸಾರ ಕೊರಳಿಗೆ ಬಿತ್ತೋ ನಿನ್ನ ಧ್ಯೇಯಗಳೆಲ್ಲ ಮೂಲೆಗೆ ಕೂರಬೇಕಾಗುತ್ತೆ. ನಾನು,

ನನ್ನ ಹೊಟ್ಟೆ ಬಟ್ಟೆ ಇವು ಮೊದಲು. ಇವು ನಮ್ಮ ಗುರಿ, ಇದಿಲ್ಲದೆ ಏನು ಮಾಡಿದರೆ ಏನು ಪ್ರಯೋಜನ. ಎಲ್ಲರು ಮಾಡ್ತಾ ಇರೋ ದೇಶ ಸೇವೇನೂ ಅಷ್ಟರಲ್ಲೇ ಇದೆ." ಎಂದು ತನ್ನ ಮನಸ್ಸನ್ನೆಲ್ಲ ಬಿಚ್ಚಿ ಹೇಳಿದ.

ನನಗೂ ಕೂಡ ಎಷ್ಟೋ ಸಾರಿ ಈ ಭಾವನೆ ಮನಸ್ಸಿನಲ್ಲಿ ಮೂಡಿತ್ತು. ಆದರೆ ಬಲವಂತದಿಂದ ಅದನ್ನು ಕಿತ್ತೊಗೆಯಲು ಪ್ರಯತ್ನಿಸಿದ್ದೆ. ನನ್ನ ರೈಲು ಬಹಳ ಹಿಂದೆಯೇ ಕಂಬಿ ತಪ್ಪಿ ಬೇರೆ ದಾರಿ ಹಿಡಿದುಬಿಟ್ಟಿತು. ಮತ್ತೆ ಅದನ್ನ ಕಂಬಿಯ ಮೇಲೆ ತಂದು ನಿಲ್ಲಿಸಲು ಮಾಡಿದ ಪ್ರಯತ್ನವೆಲ್ಲ ವಿಫಲವಾಗಿದ್ದಿತು. ಸರ್ಕಾರಿ ನೌಕರಿ ಸಿಗದಿರುವಾಗ ಸ್ವತಂತ್ರ ಜೀವನ ವನ್ನೇ ಆಲಂಗಿಸಬೇಕಷ್ಟೆ!

ಸ್ವಾತಂತ್ರ್ಯ! ಸ್ವತಂತ್ರ, ಜೀವನ. ರಾಷ್ಟ್ರೀಯ ಸಂಸ್ಥೆಗಳು– ಎಲ್ಲವನ್ನೂ ಹೊಕ್ಕು ನೋಡಿದ್ದಾಯಿತಲ್ಲ. ಅಲ್ಲೂ ಕೂಡ ಸ್ವಾರ್ಥ ತುಳುಕಾಡುತ್ತಿದೆ. ಅಲ್ಲೂ ಸ್ಪರ್ಧೆ, ಪೈಪೋಟಿ ತಪ್ಪಿದಲ್ಲ. ಅಲ್ಲೂ ಮೋಸ, ದಗ ಇದೆ. ಎಲ್ಲಿಯವರೆಗೆ ಮನುಷ್ಯ ಮನುಷ್ಯನಾಗಿರುತ್ತಾನೋ ಅಲ್ಲಿಯವರೆಗೂ ಇದು ತಪ್ಪಿದಲ್ಲ.

"ಗುಮಾಸ್ತನಿಗೇಕೆ ಮಜ್ಜಿಗೆ ಹುಳಿ ಎಂತ ಜನ ಹಾಸ್ಯ ಮಾಡ್ತಾರಪ್ಪ" ಎಂದು ಪ್ರಾರಂಭಿಸಿದ ಗುಂಡಣ್ಣ "ಅನ್ನುವವರು ಅನ್ನುತ್ತಿರಲಿ. ಗುಮಾಸ್ತ ಕತೆ ಬರೆದರೆ ಹಾಸ್ಯ ಮಾಡುತ್ತಾರೆ. ಗುಮಾಸ್ತ ಭಾಷಣ ಮಾಡಬಂದರೆ ನಗುತ್ತಾರೆ. ಗುಮಾಸ್ತ ಕವಿಯಾದರೆ ಅಟ್ಟಹಾಸ ಮಾಡುತ್ತಾರೆ. ಕಛೇರಿಯ ಕವಿಗಳು ಎಂದು ನಮ್ಮನ್ನ ಅನೇಕರು ಗೇಲಿ ಮಾಡಿದ ರಪ್ಪ. ಅನ್ನುವವರು ಅಂತಾ ಇರಲಿ. ನಾವು ಮಾತ್ರ ನಮ್ಮ ಗುರಿ ಬಿಡದಿದ್ದರಾಯಿತು."

ಗುಂಡಣ್ಣನ ಮಾತಿನಲ್ಲಿ ನನಗೆ ಹೊಸದೊಂದು ಬೆಳಕು ಕಾಣ ಹತ್ತಿತು.

ಹೃದಯದಲ್ಲಿ ಒಂದು ರೀತಿಯ ತಳಮಳವಾಯಿತು. ಮೈ ನೋಡಿ ಕೊಂಡೆ. ಒಂದು ಲುಂಗಿ, ಒಂದು ಅಂಗಿ, ಒಗೆದು ವಾರವಾಗಿತ್ತೋ ಏನೊ. ಖಾದಿಯಾದ್ದರಿಂದ ಗೌರವ. ಮನೆಯಲ್ಲಿ ಮಿಲ್ ಬಟ್ಟೆ

ಯಾದರೂ ಹೊರಗೆ ಮಾತ್ರ- ಈ ಖಾದಿ ವೇಷ. ತಲೆ ಬೋಳು, ಬರೀ ಕಾಲು, ಎಲ್ಲ ಬರೀದು. ಸ್ವಾತಂತ್ರ್ಯ ಅಂತ ಕೂಗಿ ನಾನು ಕಡಿದದ್ದಾದರೂ ಏನು? ಬರೆದೆ, ಅಚ್ಚು ಮಾಡಿದೆ, ಭಾಷಣ ಕೊಟ್ಟೆ, ಗಲಾಟೆ ಮಾಡಿದೆ, ಪೇಪರ್ ಹೊರಡಿಸಿ ಪಾಪರ್ ದೆಸೆಗೆ ಬಂದೆ. ಉದ್ಯಮಗಳೆಲ್ಲ ಉರುಳಿದವು. ಖಚಿತವಾಗಿ ನನ್ನ ಪರಿಮಿತಿಯನ್ನು ನಾನು ತಿಳಿದುಕೊಂಡು ನನ್ನ ಕೈಲಾದಷ್ಟು ಮಾತ್ರ ದೇಶಸೇವೆ ಮಾಡಿದ್ದರೆ ನಾನೂ ಬದುಕಿ ಇತರರನ್ನೂ ಬದುಕಿಸುತ್ತಿದ್ದೆ. ದೇಶಕ್ಕಿಂತ ಮನೆ ಮುಖ್ಯ ಎಂಬ ಭಾವನೆ ಈ ಹೊತ್ತಿನವರೆಗೂ ನನಗೆ ಬರಲಿಲ್ಲವಲ್ಲ. ಮಕ್ಕಳಿಗಿಲ್ಲ, ಮರಿಗಿಲ್ಲ, ಹೆಂಡತಿಗಿಲ್ಲ. ದುಡಿಯುವ ಕಾಲಕ್ಕೆ ಬರ ಬೇರೆ. ಬರಗಾಲದಲ್ಲಿ ಅಧಿಕ ಮಾಸ ಬೇರೆ........ಏನು ಜೀವನ ಇದು?

ಗುಂಡಣ್ಣ ಆಫೀಸರು ಬರುವ ಹೊತ್ತಾಯಿತೆಂದು ನನ್ನನ್ನು ಬೀಳ್ಕೊಟ್ಟು ಹೊರಟು ಹೋದ. ಅವನು ಹೋದಮೇಲೂ ಬಹಳ ಹೊತ್ತಿನವರೆಗೆ ನಾನು ಹೊಟಲಿನಲ್ಲೇ ಕುಳಿತು ಸಿಗರೇಟು ಸೇದುತ್ತಿದ್ದೆ. ಒಂದು ಕಾಲದಲ್ಲಿ ಸರಸಮ್ಮ ತಮ್ಮ ಯಜಮಾನ ಗುಂಡೂರಾಯರು ಗುಮಾಸ್ತರಾದ ವಿಚಾರವನ್ನು ಹೇಳಿದಾಗ ನಾನು ಅವರೆದುರಿಗೇ ಅವರ ಯಜಮಾನರನ್ನು ಕುರಿತು ಹಾಸ್ಯಮಾಡಬೇಕೆಂದಿದ್ದೆ. ಈಗ ನನ್ನ ಹೃದಯ ಬೇರೊಂದು ವಿಧವಾಗಿ ಸಂಶಯಪಡುತ್ತಿದೆ. ನನ್ನ ಹೆಂಡತಿ ನನ್ನ ಕೆಲಸದ ವಿಚಾರವಾಗಿ ಯಾರಿಗೆ ಏನು ಹೇಳಿದ್ದಾಳೋ ಎಂಬ ಹೆದರಿಕೆ ದಿನದಿನಕ್ಕೆ ಬಲವಾಗುತ್ತಿದೆ!!



# ಸಂತೋಷ ಸೂಚಕ ಸಭೆ

ಮಾನ್ಯ ಮಿತ್ರರೇ ಮತ್ತು ಅಕ್ಕತಂಗಿಯರೆ,

ಶ್ರೀಯುತರ ನಿಧನದ ಬಗ್ಗೆ ಏರ್ಪಡಿಸಿರುವ ಈ ಸಭೆಗೆ ನೀವೆಲ್ಲ ದಯಮಾಡಿಸಿರುವುದು ಒಂದು ಸಂತೋಷದ ಸಂಗತಿ. ಅಲ್ಲದೆ ಶ್ರೀಯುತರು ಬದುಕಿದ್ದಾಗ ಅವರ ಭಾಷಣವನ್ನಾಗಲೀ ಕಾವ್ಯವಾಚನವನ್ನಾಗಲೀ ಕೇಳಲು ಜನ ಬರುತ್ತಲೇ ಇರಲಿಲ್ಲವಾದರೂ, ಇಂದು ಅವರ ನಿಧನದ ಸಂಬಂಧವಾಗಿ ನಡೆಯಲಿರುವ ಈ ಸಭೆಗೆ ನೀವೆಲ್ಲರೂ ಬಂದು ಇಷ್ಟು ಉತ್ಸಾಹದಿಂದ, ಸ್ಫೂರ್ತಿಯಿಂದ, ತಾಳ್ಮೆಯಿಂದ, ಮೌನದಿಂದ ನೆರೆದಿರುವುದನ್ನು ನೋಡಿದರೆ ಒದುಕಿಗಿಂತ ಸಾವೇ ಮೇಲು ಅನಿಸುತ್ತದೆ. ದಿವಂಗತರು ಉಚ್ಚರೀತಿಯ ಕಲಾವಿದರಾಗಿದ್ದರು. ಅವರ ಜೀವನವೇ ಒಂದು ಕಾವ್ಯದಂತಿತ್ತು. ಅವರಾಡಿದ ಒಂದೊಂದು ಮಾತೂ ಮುತ್ತಿನಂತೆ ಹೊರಬೀಳುತ್ತಿದ್ದವು. ಅವುಗಳನ್ನು ಕದ್ದು ತಮ್ಮ ಪತ್ರಿಕೆಗಳನ್ನು ತುಂಬಿಸಿಕೊಳ್ಳುದಕ್ಕಾಗಿ ಅನೇಕ ಜನ ಅವರನ್ನು ಆಶ್ರಯಿಸಿದ್ದರು. ಅವರ ಪುಸ್ತಕಗಳು ಖರ್ಚಾಗುತ್ತವೆ ಎಂದು ತಿಳಿದ ಕೆಲವು ಮಂದಿ ಗೆಳೆಯರು ಶ್ರೀಯುತರನ್ನು ಆಶ್ರಯಿಸಿ, ಅವರನ್ನು ಹೊಗಳಿ ಪುಸ್ತಕಗಳನ್ನು ಮಾಲಿ ಮಾಡಿ ಅಚ್ಚುಹಾಕಿ ಹಣಮಾಡಿಕೊಂಡರು. ಆದರೆ ಕವಿಗೋ ಒಂದು ಬಿಡಿಗಾಸೂ ಗಿಟ್ಟಲಿಲ್ಲ. ಬದುಕಿರುವವರೆಗೂ ಅವರು ಬಡವರಾಗಿಯೇ ಇದ್ದರು. ಜನಕ್ಕೆ ಗೊತ್ತು; ಕಲಾವಿದರಿಗಿಂತ ಕಲೆ ದೊಡ್ಡದು ಎಂದು! ಏಕೆಂದರೆ ಕಲಾವಿದ ಅಲ್ಪಾಯು. ಇಂದಿದ್ದು ನಾಳೆ ಸಾಯುತ್ತಾನೆ. ಆದರೆ ಕಲೆಯೋ ಚಿರಾಯು. ಪುಸ್ತಕಗಳು ಖರ್ಚಾದಷ್ಟೂ ಪ್ರಕಾಶಕರಿಗೆ ದುಡ್ಡು ಬರುತ್ತದೆ. ಆದ್ದರಿಂದ ಕಲೆ ದೊಡ್ಡದು. ಅಲ್ಲದೆ ಈ ಕವಿ

ಬದುಕಿದ್ದಾಗ ದೊಡ್ಡದಾಗಿ ಕಾವ್ಯ ಬರೆಯಲು ಹೊರಟದ್ದೇ ತಪ್ಪು ಎಂದು ನಮ್ಮ ಭಾವನೆ. ಅವನಿಗೆ ಯಾರು ಹೇಳಿದರು ಕಾವ್ಯಬರಿ, ಕವಿಯಾಗು, ಎಂದು? ಅದರ ಬದಲು ಬದನೇಕಾಯಿ ಮಾರಿದ್ದರೆ ತನಗೂ ದುಡ್ಡು ಇತರರಿಗೂ ತರಕಾರಿ ಆಗುತ್ತಿತ್ತಲ್ಲ!

ಆ ಮಾತು ಅಲ್ಲಿಗೆ ಇರಲಿ. ಪ್ರಕೃತ ವಿಷಯಕ್ಕೆ ಬರೋಣ. ಇಂದು ನಿಮ್ಮೆಲ್ಲರ ಮುಂದೆ ನನ್ನನ್ನು ತಂದು ಅಧ್ಯಕ್ಷನನ್ನಾಗಿಸಿ ನಿಲ್ಲಿಸಿ, ಕವಿ-ಕಾವ್ಯವಿಚಾರವಾಗಿ ಎರಡು ಮಾತನಾಡಲು ಅವಕಾಶ ಕಲ್ಪಿಸಿಕೊಟ್ಟದ್ದ ಕ್ಕಾಗಿ ನಾನು ನನ್ನ ಹೃತ್ಪೂರ್ವಕವಾದ ಸಂತೋಷವನ್ನು ಸೂಚಿಸುತ್ತೇನೆ. ಮತ್ತು ಇಂಥಾ ಕಾರ್ಯಕ್ರಮಗಳು ಮೇಲಿಂದ ಮೇಲೆ ನಡೆಯಲಿ, ಜನ ನೆರೆಯಲಿ, ನಾಡು ನುಡಿ ಉದ್ಧಾರವಾಗಲಿ ಎಂದು ದೇವರಲ್ಲಿ ಪ್ರಾರ್ಥಿಸು ತ್ತೇನೆ.

ನಮ್ಮ ಈ ಮಂದಿರ ಬಹಳ ಭವ್ಯವಾದದ್ದು. ದಿವ್ಯವಾದದ್ದು. ನೋಡಿ, ಗೋಡೆಯ ಮೇಲೆ ಸುತ್ತಲೂ ಕೀರ್ತಿವಂತರಾದ ಎಷ್ಟು ಜನ ದಿವಂಗತರಾದ, ಅದೆಷ್ಟು ಜನ ಮಹನೀಯರ ಭಾವಚಿತ್ರಗಳು ನೇತಾಡುತ್ತಿವೆ. ಇವರಲ್ಲಿ ಒಬ್ಬೊಬ್ಬರೂ ನುಡಿಯ ಉದ್ಧಾರಕ್ಕಾಗಿ ಜೀವವನ್ನು ತೇದು, ನಾಡಿನ ಹಿರಿಮೆಗಾಗಿ ಸತ್ತು ಸುಣ್ಣವಾದವರೇ! ಇವರ ಭಾವ ಚಿತ್ರಗಳಿಂದ ಭವನಕ್ಕೊಂದು ಬೆಳಕು ಬಂದಂತಿದೆ. ಆದರೆ ಏನು ಮಾಡುವುದು, ಈ ಚಿತ್ರಗಳ ಸಾಲು ಇನ್ನೂ ಪೂರ್ತಿವಾಗಿಲ್ಲ. ನಲವತ್ತೆರಡು ಆಗಬೇಕು, ಈಗ ಮೂವತ್ತೆಂಟು ಮಾತ್ರ ಇವೆ. ಇನ್ನು ನಾಡಿನ ಮಹನೀಯರಲ್ಲಿ ನಾಲ್ಕುಮಂದಿ ಬೇಗ ಮನಸ್ಸುಮಾಡಿ ಕೀರ್ತಿ ವಂತರಾಗಿ – ಮಿಗಿಲಾಗಿ ದಿವಂಗತರಾಗಿ – ಭಾವ ಚಿತ್ರಗಳನ್ನು ಕೊಡು ವುದರ ಮೂಲಕ ಈ ಚಿತ್ರಮಾಲೆಯನ್ನು ಪೂರ್ತಿಗೊಳಿಸುವ ಕಾಲ ಬೇಗನೆ ಬರಬಾರದೆ? ಇಂಥಾ ದೊಡ್ಡ ನಾಡಿನಲ್ಲಿ ನಾಲ್ಕು ಜನ ಇಲ್ಲ ಎಂದರೆ ನಾಡು – ನುಡಿಗೆ ಅವಮಾನವಲ್ಲವೆ?

ಮನುಷ್ಯ ಸಾವಿಗೆ ಅಂಜಬಾರದು. ಸಾವೆಂದರೇನು? ಬದುಕಿನ ಒಂದು ಕೊನೆ ಅಷ್ಟೆ. ಹುಟ್ಟು ಸಾವಿನ ಮಧ್ಯೆ ಬದುಕು ಕಾಣಿಸಿಕೊಳ್ಳು ತ್ತದೆ. ಒಂದಿಲ್ಲದೆ ಇನ್ನೊಂದು ಶೋಭಿಸದು. ನಮ್ಮ ನಾಡು ಸಾವಿರ

ವರ್ಷದ ಚರಿತ್ರೆಯನ್ನು ಹೊತ್ತು ಬೆಳಗುತ್ತಿದೆ. ಚರಿತ್ರೆಯ ಗರ್ಭದಲ್ಲಿ ಅದೆಷ್ಟು ಜನ ರಾಜ ಮಹಾರಾಜರು, ಕಾವ್ಯ ಕಲಾನಿಪುಣರು, ಗಮಕಿ ವಾಗ್ಮಿಗಳು ಮರೆಯಾಗಿರುವರೊ! ಅವರೆಲ್ಲ ಸತ್ತುವೇಕೆ? ಹಳತೆಲ್ಲ ಹೋಗಬೇಕು, ಹೊಸತು ಮೂಡಬೇಕು ಎಂಬ ಸದಾಶಯದಿಂದ ತಾನೆ? ಅದಕ್ಕಾಗಿಯೇ ನಾವು ಸಾವನ್ನು ಕಂಡು ಸಂತಪಿಸಬಾರದು, ಸಂತೋಷ ಪಡಬೇಕು. ನಮ್ಮ ನಾಡು, ನುಡಿಯ ಚರಿತ್ರೆ ಕೇವಲ ಹತ್ತೊಂಬತ್ತನೆಯ ಶತಮಾನಕ್ಕೇ ನಿಂತುಹೋಗಿದೆ. ಅದು ಸನ್ನಿವೇಶಕ್ಕೆ ಇನ್ನು ಮುಂದುವರಿಯು ವಂತಿಲ್ಲ; ಏಕೆಂದರೆ ಬದುಕಿರುವ ಜನದ ಜೀವನದ ವಿಚಾರವಾಗಿ ಟೀಕೆ ಮಾಡಲು ಜನ ಹೆದರುತ್ತಿದ್ದಾರೆ. ಬೈದು ಬರೆದರೂ ಕಷ್ಟ ಹೊಗಳಿ ಬರೆದರೂ ಕಷ್ಟ ಎನ್ನುವ ಧರ್ಮ ಸಂಕಟ ಈಗ ಒದಗುತ್ತಿದೆ. ಇದು ಎಂದಿಗೆ ಕೊನೆಗಾಣಬೇಕು? ಕವಿಯ ಆಶಯವೇನು? ಬಲ್ ಬಿರುದೆ? ಬಳುವಳಿಯೆ? ಕವಿತೆಯೊಳ್ ಆಸೆಗೆಯ್ವ ಫಲವಾದರೂ ಏನು? ಪೂಜೆಯೆ; ನೆಗವಿತ್ತ್ರಿಯೆ! — ಏನಲ್ಲಿ? ಕವಿಯಾದವನು ಅವನ್ನೆಲ್ಲ ಬಯಸಬಾರದು, ಬಯಸಿದರೂ ಅವು ಅವನಿಗೆ ಸಿಕ್ಕಲಾರವು. ಅವನು ಬಾಯಿ ಮುಚ್ಚಿಕೊಂಡು ಕಾವ್ಯವನ್ನು ಬರೆಯಬೇಕು, ಮತ್ತು ಬೇಗ ಸಾಯಬೇಕು. ಆಗ ಸಂಘದವರು, ಸಂಸ್ಥೆಯವರು, ವಿಮರ್ಶಕರು ಎಲ್ಲರೊಂದಾಗಿ ಕವಿಯ ದಾರುಣ ದುರಂತವನ್ನು ಕುರಿತು ಮಾತನಾಡಿ, ಆಡಿದುದನ್ನು ಬರೆದು ನುಡಿಯ ಸಾಹಿತ್ಯವಾಹಿನಿಯನ್ನು ಬೆಳೆಸುತ್ತಾರೆ. ಇದು ದಾರಿ! ಉದಾಹರಣೆಗೆ: ವೇದ, ಉಪನಿಷತ್, ಪಂಪ, ರನ್ನ ನಾರಣಪ್ಪ, ಮಿಲ್ಟನ್ ಇವರ ವಿಚಾರದಲ್ಲಿ ನಾವು ಮಾತನಾಡುವಷ್ಟು ಲಘುವಾಗಿ ಜೀವಂತನಾಗಿರುವ ಕವಿಯ ವಿಷಯವಾಗಿ ಇರಬಲ್ಲೆವೇ?

ಇಂಥಾ ಒಂದು ಸಂತೋಷ ಸೂಚಕ ಸಭೆಗೆ ಆಸ್ಪದವಿತ್ತ ದಿವಂಗತ ಶ್ರೀಮಾನ್........ರವರಿಗೆ ನೀವೆಲ್ಲ ಚಿರ ಋಣಿಗಳಾಗಿರಬೇಕು. ಅವರ ಸ್ನೇಹಿತರೆನಿಸಿಕೊಂಡ ಅನೇಕ ಮಂದಿ ಇಂದು ಈ ಸಭೆಯಲ್ಲಿ ಬೆಳಕಿಗೆ ಬಂದಿದ್ದಾರೆ. ಎಲ್ಲರೂ ಹೊಸಬರೇ. ಆದರೂ ಎಷ್ಟು ಮಧುರವಾಗಿ, ಕವಿಗೂ ತಮಗೂ ಇದ್ದ ಗೆಳೆತನವನ್ನು ನಿಜವೆನ್ನುವಂತೆ ವರ್ಣಿಸಿದ್ದಾರೆ! ಇಷ್ಟೆಲ್ಲ ಮಾನ್ಯ ಮಿತ್ರರೊಂದಿಗೆ ಹೊಂದಿ ಬಾಳಿದ ಕವಿ ನಿಜವಾಗಿಯೂ

ಧನ್ಯನೆ. ಆದರೆ ಗೆಳೆಯರ ಮಧ್ಯೆ ಇದ್ದೂ ಕೂಳಿಲ್ಲದೆ ಸತ್ತುದು ಕವಿಯ ದುರದೃಷ್ಟ. ಅದಕ್ಕೆ ಯಾರು ಏನು ಮಾಡುವುದಕ್ಕಾಗುತ್ತದೆ. ಅಂಥ ದೆರಲ್ಲೂ ಮಿತ್ರರನೇಕರು ಚಂದಾ ಎತ್ತಿ ಕವಿಗೆ ಸಹಾಯಮಾಡುವ ಉದ್ಯಮದಲ್ಲಿದ್ದರು. ನಾಡಿನ ಸೌಭಾಗ್ಯವನ್ನು ಏನೆಂದು ಹೇಳೋಣ! ಎತ್ತಿದ ಚಂದಾಹಣ ಕೂಳಿಗೆ ಆಗಲಿಲ್ಲ, ಗಳುವಿಗಾಯಿತು. ಅಂದು ಬಂದು ಕವಿಗೆ ಹೆಗಲನ್ನು ಕೊಟ್ಟು ಅವನ ಭಾರವನ್ನು ಹೊತ್ತ ನಾಲ್ವರು ಏನು ಪುಣ್ಯಶಾಲಿಗಳೋ! ಸ್ನೇಹ ಸತ್ತರೂ ಬಿಡದ ಒಂದು ಅಂಟು. ಮಸಾಲೆಗೆ ಬಂದವನು ಮಣಕ್ಕೆ ಬರದೆ ಹೋಗುವನೇ ?

ಶ್ರೀಯುತರ ನಿಧನದ ಬಗ್ಗೆ ನಾವು ಸಂತೋಷಪಡಲು ಇನ್ನೊಂದು ಕಾರಣವಿದೆ. ಶ್ರೀಯುತರ ಜೀವ ಇಷ್ಟು ದಿನವೂ ಒಂದು ಆಗಿದ್ದುದು ಇಂದು ನಾಡಿನ ನೂರಾರು ಯುವಕ ಯುವತಿಯರ ಹೃದಯದಲ್ಲಿ ಶಕ್ತಿ ಯಾಗಿ ಮೂಡಿ ನಿಂತಿದೆ. ಅದೇ ಸ್ಫೂರ್ತಿಯಿಂದ ಶ್ರೀಯುತರ ಕಾವ್ಯಗಳ ಮಾದರಿಯಲ್ಲಿಯೇ ಇನ್ನು ಮುಂದೆ ನೂರಾರು ಗ್ರಂಥಗಳು ಹುಟ್ಟುತ್ತವೆ. ಅದೆಷ್ಟು ಜನರಿಗೆ ಅದರಿಂದ ಉಪಕಾರವಾಗಲಾರದು.

ಕೊನೆಯದಾಗಿ ಒಂದು ಮಾತನ್ನು ಮಾತ್ರ ಹೇಳಿ ನನ್ನ ಭಾಷಣ ವನ್ನು ಮುಗಿಸುತ್ತೇನೆ. ಇಂದಿನ ಸಭೆಯಲ್ಲಿ, ಸರಿಯಾದ ಏರ್ಪಾಡು ಗಳನ್ನು ಮಾಡಿರಲಿಲ್ಲವಾಗಿ, ತಿಂಡಿ ದೇಹದ ವಿಷಯದಲ್ಲಿ ಸ್ವಲ್ಪ ಅಪದ್ಧ ವಾಯಿತು. ನಿಜ. ಇನ್ನು ಮುಂದೆ, ಇಂಥಾ ಕೂಟಗಳು ಹೆಚ್ಚಾಗುವ ಸೂಚನೆಗಳಿರುವುದರಿಂದ ಮುಂದಿರದವರು ಒಂದು ಕಾರ್ಯನಿರ್ವಾಹಕ ಸಮಿತಿಯನ್ನು ರಚಿಸಿ, ಸ್ವಲ್ಪ ಹಣಸೇರಿಸಿ ವ್ಯವಸ್ಥೆಯಿಂದಿರುವುದು ಮೇಲು.

ಜೈ ನಮ್ಮ ನಾಡಿಗೆ.
ನುಡಿ ಬಾಳ್ಗೆ...ಕಲೆ ಬಾಳ್ಗೆ.
ಕವಿ ಸಾಯ್ಗೆ!!!



# ಹೊಸ ಕಥೆ

ಗುಹಾಪುರದ ಮಹಾದ್ವಾರದ ಬಳಿ ಇರುವ ಸಾಲುಗೇರಿಯ ಮೂಲೆಯ ಮನೆಯೊಂದರ ಮುಂದೆ ಮಂದೆ ಮಂದೆಯಾಗಿ ಜನ ಗುಂಪು ಗೂಡುತ್ತಿದ್ದರು. ಕೋಲಾಹಲವು ಹಾಲಾಹಲದಂತೆ ಎದ್ದು ಗುಹಾಪುರದ ಗವಿ ಗಹ್ವರಗಳಿಂದ ಪ್ರತಿಧ್ವನಿತವಾಗುತ್ತಿತ್ತು. ಒಬ್ಬ ಗಂಡಸು ಬಹಳ ಗಟ್ಟಿಯಾಗಿ, ಗುಂಪಿನ ಗದ್ದಲವನ್ನೂ ಮೀರಿ ಕೂಗಾಡುತ್ತಿದ್ದುದು ಮೂರು ಮೈಲಿ ಆಚೆ ಇರುವವರಿಗೂ ಸ್ಪಷ್ಟವಾಗಿ ಕೇಳುತ್ತಿತ್ತು. ಆತ "ಸರ್ಕಾರದವರು ಇಷ್ಟು ಸಿಬ್ಬಂದಿ ಸಿಪಾಯಿ, ಸೈನ, ಪೋಲೀಸು ಪಹರೆ ಎಲ್ಲಾ ನೇಮಿಸಿದ್ದರೂ ಇಂಥಾ ಪಟಿಂಗರು ಪರರ ಮನೆಗೆ ಕನ್ನಹಾಕಿ ಕದ್ದು ಹೊಟ್ಟೆ ಬಟ್ಟೆಗೆ ಗಿಟ್ಟಿಸಿ ಬಿಡಬೇಕು ಅಂತಾರಲ್ಲಾ ಸ್ವಾಮಿ! ಪೋಲೀಸಿನವರಿಗೆ ಕಾಣಿಸದೇ ಇದ್ರೆ ಪರಮಾತ್ಮನಿಗೆ ಕಾಣಿಸೋದಿಲ್ವೆ? ನೋಡಿ, ಇವ ನನ್ನ ಮನೇ ಕಾಂಪೌಂಡು ಹಾರಿ ಬಂದು ಕನ್ನ ಹಾಕಿ ಕದ್ದು ಹಿಂತಿರುಗಿ ಹೋಗುವಾಗ ಕಾಂಪೌಂಡಿಂದ ಬಿದ್ದು ರಕ್ತ ಕಾರಿ ಹರ ಹರಾ ಅಂತ ರೌರವ ನರಕಕ್ಕೆ ಹೋಗಿದ್ದಾನೆ. ಇವನೇನಾದರೂ ಜೀವಂತ ಸಿಕ್ಕಿದ್ದರೆ ದಾವಾಮಾಡಿ, ದೂರು ಹೇಳಿ ದೊರೆ ಹತ್ರ ಹೋಗಿ ಇವನಿಗೆ ಫಾಸಿ ಶಿಕ್ಷೆ ಮಾಡಿಸ್ತಿದ್ದೆ" ಎಂದು ಅರಚಾಡುತ್ತಿದ್ದ.

ಗುಂಪಿನಲ್ಲಿದ್ದ ಇನ್ನೊಬ್ಬ ಹೆಂಗಸು ಇಷ್ಟು ಹೊತ್ತೂ ಸುಮ್ಮನಿದ್ದು ಗಂಡಸಿನ ಮಾತು ಮುಗಿಯುತ್ತಿದ್ದಂತೆ ಪ್ರಾರಂಭಮಾಡಿದಳು. "ಏನ್ರಪ್ಪ. ನೀವೆಲ್ಲ ಧರ್ಮಾತ್ಮರು ಇಲ್ಲಿ ಸೇರಿದೀರಲ್ಲ. ನೀವೆಲ್ಲ ಯೋಚನೆಮಾಡಿ ಹೇಳಿ. ನನ್ನ ಗಂಡ ಕಳ್ಳ. ಸುಳ್ಳ. ಕದ್ದೇ ಜೀವನ ಮಾಡ್ತಾ ಇದ್ದ. ಅದೆಲ್ಲ ನಿಜ ಕಣ್ರಪ್ಪ. ನಿನ್ನೆ ದಿನ ಇವರ ಮನೆ ಮೂರು ಮಡಕೇನ

ಕದಿಯೋಕೇ ಅಂತ ಬಂದು ಪ್ರಾಣಾನೇ ಬಿಟ್ಟನಲ್ಲ ಇದೇನಂತ ನ್ಯಾಯಾ ನ್ರಪ್ಪ. ಮನೇ ಕಟ್ಟೋರು ಸರಿಯಾಗಿ ಇಟ್ಟಿಗೆ ಗಾರೆ ಗಚ್ಚು ಹಾಕಿ ಕಟ್ಟ ಬೇಕು. ಹೀಗೆ ಎರಡು ಕಡ್ಡಿ ನೆಟ್ಟು ಮಣ್ಣು ಮೆತ್ತಿ ಯಾರಾದರೂ ಕಟ್ಟುತಾರೆಯೆ? ಈ ಕಾಂಪೌಂಡು ನೋಡಿ. ಗೆದ್ದಲ ಹುತ್ತ ಇದ್ದಂಗಿದೆ. ಕಾಲಿಟ್ಟರೆ ಕುಸಿದು ಬೀಳುತ್ತೆ. ನನ್ನ ಗಂಡ ಇಂಥಾ ಗೋಡೆ ಹಾರಲಿಕ್ಕೆ ಹೋಗಿ ಪ್ರಾಣಬಿಟ್ಟನಲ್ಲಾ! ಈಗ ಪ್ರಾಣಾನ ಯಾರು ಕೊಡಬೇಕು?– ದೊರೆಗಳ ಹತ್ರ ದೂರು ಹೇಳತೀನಿ" ಎನ್ನುತ್ತಾ ಹೆಂಗಸು ಗೊಳೋ ಎಂದು ಗೋಳಿಡುತ್ತ ಅರಮನೆಗೆ ಹೋದಳು.

ಗುಹಾಪುರದ ಮಹಾಪ್ರಭು ಪರರಾಜ್ಯ ಹಿತಚಿಂತಕ, ಯುದ್ಧ ಸಹಾಯಕ, ಶ್ರೀ ಪುಂಗವನು ತನ್ನ ಧರ್ಮ ದಂಡವನ್ನು ಕೈಲಿ ಹಿಡಿದು ಈ ಫಿರ್ಯಾದನ್ನು ಖುದ್ ಪರಿಶೀಲಿಸಿ ತನ್ನ ಹಿಂದಿನ ಹದಿನಾಲ್ಕು ಮಂದಿ ಪುರಾತನರ ಕೀರ್ತಿಗೆ ಕಳಂಕ ಬರದಂತೆ ತೀರ್ಪು ಕೊಟ್ಟನು. ಕಳವಿಗಿಂತ ಕಳ್ಳ ಸತ್ತದ್ದು ಮುಖ್ಯ. ಏಕೆಂದರೆ ಧನಕ್ಕಿಂತ ಪ್ರಾಣ ಹೆಚ್ಚಿನದು. ಪ್ರಾಣ ಹೋಗಿರೋದು ಮೋಟು ಗೋಡೆಯಿಂದ. ಗೋಡೆ ಆ ಗೃಹಸ್ಥನ ಮನೆಯದು. ಆದುದರಿಂದ ಈಗ ಗೃಹಸ್ಥನನ್ನು ಗಲ್ಲಿಗೆ ಹಾಕಿಸಿಬಿಡಿ! ಎಂದು ತೀರ್ಮಾನವಾಯಿತು.

ಗೃಹಸ್ಥ ತಬ್ಬಿಬ್ಬಾಗಿ ಓಡಿಬಂದು ದೊರೆಗಳಲ್ಲಿ ಹೇಳಿದ. ತಾನು ಮನೆಯ ಯಜಮಾನ ಮಾತ್ರ, ತಾನೇ ಮನೆಯನ್ನು ಕಟ್ಟಲಿಲ್ಲ ಎಂದು. ಕಟ್ಟಿಸಿದವನು ತಾನು. ಕಟ್ಟಿದವನು ಕಂಟ್ರಾಕ್ಟರ್ ನರಸಾಬೋಯಿ. ಅವನ ತಲೆ ಹೋಗಬೇಕಾದ್ದು ನ್ಯಾಯ.

ಇದನ್ನು ಕೇಳುತ್ತಿದ್ದ ಹಾಗೆಯೇ ನರಸಾಬೋಯಿ ಕೈಲಿದ್ದ ಗಜ ಕಡ್ಡಿಯನ್ನು ಅಲ್ಲೇ ಬಿಸಾಡಿ, ಬೀಡಿ ಮರೆತು ಓಡಿಬಂದ. ನರಸಾ ಬೋಯಿ ದೊಡ್ಡ ಕಂಟ್ರಾಕ್ಟರ್ ಆದರೂ ಆತನೇ ಖುದ್ದು ಯಾವ ಮನೆ ಯನ್ನೂ ಕಟ್ಟುತ್ತಿರಲಿಲ್ಲ. ಹಿಂದೆ ಹುಡುಗನಾಗಿದ್ದಾಗ ಕರಣೆ ಹಿಡಿದು ಕೆಲಸಮಾಡಿದ ನೆನಪಿದೆ, ಅಷ್ಟೆ. ಈಗ ಗೃಹಸ್ಥನ ಮನೆಯ ಮೋಟು ಗೋಡೆಯನ್ನು ಕಟ್ಟಿದ ಕೂಲಿಗಳನ್ನು ಗಲ್ಲಿಗೆ ಹಾಕುವುದೇ ನ್ಯಾಯ.

ಕೂಲಿಗಳು ಕುಡಿದು ತೂರಾಡುತ್ತ ಹೇಳಿದರು. ಓಗಿ ಸಾಮಿ,

ಓಗಿ. ನೀನು ದೊರೆ ಆದ್ರೆ ಏನು. ನಾನು ನಿನ್ನಪ್ಪ. ನಿನ್ನ ಅರಮನೆ ವಠಾರಾನ ನಾನೇ ಕಟ್ಟಿದ್ದು. ನೋಡ್ಕೊ ಎಂಗೈತೇಂತ. ಎಂಟಾನೇ ಹತ್ತಿ ತುಳದ್ರೂ ಜುಂ ಅನ್ನಾಕಿಲ್ಲ. ಅಂತಾದ್ರಲ್ಲಿ ಈ ಪುಟಗೋಸಿ ಸೊಟ್ಟಾತೂ ಅಂತೀಯ. ನಂದೇನೈತೆ ತೆಪ್ಪು. ಆ ಗೋಡೆ ಕಟ್ಟಾವಾಗ ರಸ್ತೇ ಒಳ್ಗೆ ನಾಗಾಸಾನಿ ರಾಮಕ್ಕ ಓಗ್ತಾ ಇದ್ಲು. ಅವಳ್ನ ನೋಡ್ತಾ ನೋಡ್ತಾ ಗೋಡೆ ಹಾವಿನ ಹಾಗೆ ಡೊಂಕಾಯ್ತು. ಹಾಕು ಬೇಕಾದ್ರೆ ರಾಮಕ್ಕನ್ನ ಗಲ್ಗೆ – ಎಂದು ಮುಂತಾಗಿ........

ರಾಮಕ್ಕ ಆ ರಸ್ತೇಲಿ ಜನ್ಮೇಪಿ ಬಂದೋಳಲ್ಲ. ಅವತ್ತು ಮಾತ್ರ ಓಜರ ಪುಟ್ಟಾಚಾರಿ ಮನೇಗೇ ಅಂತ ಹೊರಟೋಳು ಆ ದಾರೀಲಿ ಹೋದಳು ಅಷ್ಟೆ. ಪುಟ್ಟಾಚಾರಿ ಕೊಡ್ತೇನೇ ಅಂತ ಹೇಳಿದ ವಂಕೀನ ತಿಂಗಳಾದರೂ ಏಕೆ ಕೊಡಲಿಲ್ಲ. ಉರುಳು ಅವನ ಕೊರಳಿಗೇ ಬೀಳ ತಕ್ಕದ್ದು.

ಪುಟ್ಟಾಚಾರಿ ಬಂದು ತನ್ನ ಪಟಾಟೋಪವನ್ನೆಲ್ಲ ಪ್ರದರ್ಶಿಸಿದ. ಅವನಿಂದ ಗಲ್ಲು ಇನ್ನೊಬ್ಬನ ಕೊರಳಿಗೆ ಹೋಯಿತು. ಅಲ್ಲಿಂದ ಮುಂದೆ ಹೋಯಿತು. ಕೊನೆಗೆ ಯಾರದ್ದು ತಪ್ಪು? "ತಪ್ಪದಾರದು, ತಿಳಿದು ನೋಡೆ ತಪ್ಪದಾರದು" ಎನ್ನುವಂತಾಯ್ತು. ದೊರೆಯ ತಲೆ ಗಿರ್ ಅಂತು. ಕಣ್ಣು ಗರಗರ ತಿರುಗಿದುವು. ಇನ್ನು ಹೀಗೆ ಸತ್ಯ ಶೋಧನೆ ಮಾಡುತ್ತ ಹೋದರೆ ಹುಚ್ಚು ಗಿಚ್ಚು ಹಿಡೀ ಬಹುದು ಎಂಬ ಸಚಿವ ಸಲಹೆಯನ್ನು ಮನ್ನಿಸಿ ರಾಜ ಒಂದು ಕೊನೆಯ ತೀರ್ಪನ್ನು ಕೊಟ್ಟನು. ಊರಿನಲ್ಲಿ ಯಾರು ಅತಿ ಧಡೂತಿ ಆಸಾಮಿಗಳೋ ಯಾರು ಹೆಚ್ಚು ದಪ್ಪವಾಗಿದಾರೋ ಅವರನ್ನ ತಂದು ಗಲ್ಲಿಗೆ ಹಾಕಬೇಕೆಂದು ಹುಕುಂ ಆಯಿತು.

ಸಿಬ್ಬಂದಿಗಳಿಗೆಲ್ಲ ಸಮಸ್ಯೆ ಒದಗಿದಂತಾಯ್ತು. ಮೊದಲನೆಯದಾಗಿ ದಪ್ಪ ದಪ್ಪನೆಯವರು ಎಲ್ಲಿ ಇರುತ್ತಾರೆ ಎಂದು ಪತ್ತೆ ಹಚ್ಚುವುದು. ಅನಂತರ ಅವರಲ್ಲಿ ಯಾರು ಹೆಚ್ಚು ದಪ್ಪ ಎಂದು ನಿರ್ಧರಿಸುವುದು. ಇಷ್ಟು ಕೆಲಸವಾಗಬೇಕು.

ಯುದ್ಧ ಕಾಲದ ರೇಷನ್ ತಿನ್ನುವ ಜನರಲ್ಲಿ ದಪ್ಪಗಿರುವವರು

ತಾನೆ ಎಲ್ಲಿ ಸಿಕ್ಕುತ್ತಾರೆ. ಆದ್ದರಿಂದ ಅಂಗಡಿಯ ಮಾಲಿಕರುಗಳು, ಬಟ್ಟೆ ವ್ಯಾಪಾರಿಗಳು, ಮಿಲಿಟರಿ ಕಂಟ್ರಾಕ್ಟರುಗಳು, ಪೋಲೀಸ್ ಅಧಿಕಾರಿಗಳು, ರೇಷನ್ ಆಫೀಸರು ಇವರನ್ನೆಲ್ಲ ಪರಿಶೀಲಿಸಿ ಅವರವರಲ್ಲಿ ಅತಿ ದಪ್ಪರಾದವರನ್ನೆಲ್ಲ ತೂಕಹಾಕಿ ಅತಿ ಭಾರವಾಗಿದ್ದ ರೇಷನ್ ಆಫೀಸರೊಬ್ಬರನ್ನ ಗಲ್ಲಿಗೆ ಹಾಕಬೇಕೆಂದು ತೀರ್ಮಾನಕ್ಕೆ ಬಂದರು. ಅವರನ್ನ ಸಾಗಿಸಲು, ನಾಲ್ಕೆತ್ತಿನ ಗಾಡಿ ಅದು ಇದು ಎಲ್ಲ ಸಿದ್ಧವಾಗುತ್ತಿರುವಾಗ ಕೆಲವರು ಸರ್ಕಾರಿ ಅಧಿಕಾರಿಗಳು ಓಡಿಬಂದು ಸ್ವಾಮಿ ಈ ರೇಷನ್ ಸಾಹೇಬರನ್ನು ಗಲ್ಲಿಗೆ ಹಾಕಿ ಪಾಪಕ್ಕೆ ಪಕ್ಕಾಗಬೇಡಿರಿ. ಇವರೇನು ಮಹಾ ದಪ್ಪ ಆಸಾಮಿಗಳಲ್ಲ. ಅಲ್ಲಿ ನೋಡಿ.—

ಊರ ಹೊರಗಿನ ನದೀ ತೀರದಲ್ಲಿ ಒಬ್ಬ ಸನ್ಯಾಸಿಗಳು ಬಂದು ಇಳಿದುಕೊಂಡಿದ್ದಾರೆ. ಅವರು ಇವರ ನಾಲ್ಕರಷ್ಟು ಇದ್ದಾರೆ. ಅವರನ್ನ ತಂದು ಗಲ್ಲಿಗೆ ಹಾಕುವುದು ನ್ಯಾಯ ಎಂದು ಒದರಿದರು.

ಅಧಿಕಾರಿಗಳು ಆ ಕಡೆ ಹೊರಟರು. ಅಷ್ಟರಲ್ಲಿ ಸನ್ಯಾಸಿಗಳು ತಮ್ಮ ಜ್ಞಾನ ದೃಷ್ಟಿಯಿಂದ ಇದನ್ನು ತಿಳಿದು "ಇಂಥಾ ಮುಟ್ಠಾಳ ರಾಜ್ಯದಲ್ಲಿ ಇರಬಾರದು, ಇನ್ನಿರಬಾರದು ಎಂದು ಕಣ್ಮರೆಯಾದರಂತೆ.

ಹೀಗೇಂತ ಒಂದು ಹೊಸ ಕಥೆ ಇದು ಎಂದು ನನ್ನ ಸ್ನೇಹಿತರು ನನಗೊಂದು ದಿನ ಹೇಳಿದರು.

ನ್ಯಾಯವಾಗಿ ನೋಡಿದರೆ ಆಫೀಸಿನಲ್ಲಿ ಕೆಲಸಮಾಡುವವರಿಗೆಲ್ಲ ಇದು ಹಳೆಯ ಕಥೆಯೆ!!

---

# ಮನೆ - ಮನೆ - ನನ್ನ ಮನೆ

ಪುರಜನರೇ, ನನ್ನ ಪ್ರಿಯ ಬಾಂಧವರೇ! ಇಲ್ಲಿ ಕೇಳಿ ಒಂದು ಸಂತೋಷದ ಸುದ್ದಿಯನ್ನು ಹೇಳುತ್ತೇನೆ. ದಯವಿಟ್ಟು ಕೇಳಿ. ನಿನ್ನೆಯ ದಿನ ಬೆಳಗ್ಗೆ ರಸ್ತೆಯಲ್ಲಿ ಒಂದು ಗಾಡಿ ಇಟ್ಟಿಗೆ ಹೋಗುತ್ತಿದ್ದುದನ್ನು ನೋಡಿದೆ. ಒಂದು ಗಾಡಿ ಇಟ್ಟಿಗೆ, ಅದನ್ನು ನೋಡಿದೊಡನೆಯೆ ನನ್ನ ಹೃದಯ ತುಂಬಿ ಬಂತು. ಒಂದು ಗಾಡಿ ಇಟ್ಟಿಗೆ ಸಾಗುತ್ತಿದೆ ಎಂದರೆ ಸಾಮಾನ್ಯದ ಮಾತಲ್ಲ. ನನಗೆ ಗೊತ್ತು ಎಲ್ಲೋ ಯಾವ ಮೂಲೆಯಲ್ಲೋ ಒಂದು ಮನೆ ತಯಾರಾಗುತ್ತಿದೆ ಎಂದು. ಬೆಂಗಳೂರಿನಲ್ಲಿ – ಪ್ರಿಯ ಬಾಂಧವರೇ – ಒಂದು ಹೊಸ ಮನೆ ತಯಾರಾಗುತ್ತಿದೆ ಎಂದರೆ ಯಾರಿಗೆತಾನೆ ಸಂತೋಷವಾಗುವುದಿಲ್ಲ? ಯುದ್ಧಕ್ಕೆ ಮುಂಚೆ 'ಮನೆ ಬಾಡಿಗೆಗೆ ದೊರೆಯುತ್ತೆ' ಎಂಬ ಬೋರ್ಡುಗಳು ಕೇರಿ ಕೇರಿಯಲ್ಲೆಲ್ಲಾ ನೇತಾಡುತ್ತಿದ್ದವು. ಯುದ್ಧ ಬಂದ ಈಚೆಗೆ ಬಾಡಿಗೆ ಹೆಚ್ಚಾಗಿರುವಂತೆ ಜನರೂ ಹೆಚ್ಚಿಬಿಟ್ಟಿದ್ದಾರೆ. ಊರು ಊರಿನಿಂದ ದೇಶ ದೇಶದಿಂದ ಜನ ಪ್ರವಾಹದಂತೆ ಬಂದು ಬೆಂಗಳೂರಿನಲ್ಲಿ ತುಂಬಿಬಿಟ್ಟಿದ್ದಾರೆ. ಈ |ಜನ ಸಂಖ್ಯೆ, ಈ ಗದ್ದಲ, ಈ ಅಭಾವ ಇವನ್ನು ಕಂಡು ಬೆಂಗಳೂರು ಬೇಜಾರಾಗಿದೆ ಎಂದು ಹೇಳಬೇಡಿ. ಬೆಂಗಳೂರು ಬೇಜಾರಾದರೆ ಪ್ರಪಂಚವೇ ಬೇಜಾರಾದಂತೆ. ಏಕೆಂದರೆ ಬೆಂಗಳೂರು ಎಂಬ ಈ ಪಟ್ಟಣ ಒಂದು ಪುಟ್ಟ ಪ್ರಪಂಚದಂತಿದೆ. ಪ್ರಪಂಚದಲ್ಲಿ ಏನೇನು ಇರಬಹುದೋ ಅದೆಲ್ಲ ಈ ಊರಿನಲ್ಲಿ ಇದೆ. ಆದ್ದರಿಂದಲೇ ಜನ ಹೀಗೆ ಇಲ್ಲಿ ಕೂಡುತ್ತಿರುವುದು. ಕೂಡಿದ ಜನ ಬಯಲಿನಲ್ಲಿ ಇರಲಾರರು. ಅವರಿಗೆಲ್ಲಾ ಮನೆ ಬೇಕು. ಈಗ ಬೆಂಗಳೂರಿನಲ್ಲಿ ನೋಡಿದರೆ ಮನೆಯೇ ಸಿಗದಂತಾಗಿ ಬಿಟ್ಟಿದೆ.

ಒಂದು ಮನೆ ಖಾಲಿಯಾದರೆ ಅಲ್ಲಿಗೆ ಬರಲು ಹದ್ದಿನಂತೆ ಹತ್ತು ಜನ ಕಾದಿರುತ್ತಾರೆ. ಇದನ್ನು ಕಂಡ ಮನೆಯ ಮಾಲಿಕರು ಒಂದಕ್ಕೆ ಹತ್ತರಷ್ಟು ಮನೆಯ ಬಾಡಿಗೆಯನ್ನು ಹೆಚ್ಚಿಸುತ್ತಿದ್ದಾರೆ. ದುಡ್ಡು ಚೆಲ್ಲಿದರೂ ಮನೆ ಸಿಗುವುದಿಲ್ಲ ಎಂಬ ಹಾಹಾಕಾರವೇ ದಿನದಿನಕ್ಕೆ ಹೆಚ್ಚುತ್ತಿದೆ.

ಮೊನ್ನೆ ಮನೆಯ ಮಾಲಿಕರಿಗೂ ಬಾಡಿಗೆ ಇರುವ ಗೃಹಸ್ಥರೊಬ್ಬರಿಗೂ ವಾಗ್ವಾದ ನಡೆಯುತ್ತಿತ್ತು. ಈಗ ಹತ್ತು ವರ್ಷದ ಹಿಂದೆ ಈ ಮನೇನ ಎಂಟು ರೂಪಾಯಿಗೆ ಬಾಡಿಗೆಗೆ ಕೊಟ್ಟಾಗ ಆ ಗೃಹಸ್ಥರಿಗೆ ಮಕ್ಕಳಿರಲಿಲ್ಲ. ಗಂಡ ಹೆಂಡತಿ ಇಬ್ಬರೇ ಇದ್ದರು. ಪುಟ್ಟ ಸಂಸಾರ ಗಲಾಟೆ ಗಿಲಾಟೆ ಇಲ್ಲ ಎಂತ ಮನೆಯವರೂ ಒಪ್ಪಿ ಬಾಡಿಗೆಗೆ ಕೊಟ್ಟರು. ಈಗ ಇಬ್ಬರಿಂದ ಸಂಸಾರದಲ್ಲಿ ಎಂಟು ಜನ ಆಗಿಬಿಟ್ಟಿದ್ದಾರೆ. ದಿನ ಬೆಳಗಾದರೆ ಮಕ್ಕಳ ಘಾಂದಲೆ. ನೀರಿನ ಖರ್ಚು, ಲೈಟಿನ ಖರ್ಚು ಹೆಚ್ಚಾಗುತ್ತಿದೆ. ಆದ್ದರಿಂದ ಆ ಗೃಹಸ್ಥ ಕೂಡಲೇ ಮನೆಯನ್ನು ಖಾಲಿ ಮಾಡಿ ಬಿಡಬೇಕೆಂದು ಯಜಮಾನರ ವಾದ. ಅದಕ್ಕೆ ಪಾಪ ಆ ಗುಮಾಸ್ತ ಗೃಹಸ್ಥ ತಾನೆ ಏನುಮಾಡಿಯಾನು? ಬಾಡಿಗೆಗೆ ಬರುವಾಗ ತಿಂಗಳಿಗೆ ಇಷ್ಟು ಬಾಡಿಗೆ ಕೊಡುತ್ತೇನೆ ಅಂತ ಒಪ್ಪಿ ಕಾಗದದಲ್ಲಿ ಆತ ಬರೆದುಕೊಟ್ಟಿದ್ದನೇ ವಿನಾ, ಕೊನೇತನಕ ಗಂಡ ಹೆಂಡತಿ ಇಬ್ಬರೇ ಇರುತ್ತೇವೆ ಎಂದು ಬರೆದು ಕೊಟ್ಟಿರಲಿಲ್ಲ. ಇಬ್ಬರಿದ್ದವರು ಎಂಟು ಜನರಾದುದರಲ್ಲಿ ಅವನದೇನೂ ತಪ್ಪಿಲ್ಲ. ಬಡಗುಮಾಸ್ತರಿಗೆ ಮಕ್ಕಳು ಹೆಚ್ಚು ಎಂದು ತಿಳಿದವರು ಹೇಳುತ್ತಾರೆ. ಇಬ್ಬರಿರುವ ಮನೆಯಲ್ಲೇ ಎಂಟು ಜನರೂ ಇದ್ದಾರಲ್ಲ ಎಂದು ನಾವು ಸಂತೋಷಪಡಬೇಕು, ಆಶ್ಚರ್ಯ ಪಡಬೇಕು! ಅಲ್ಲವೇ?

ಮಾನ್ಯ ಪೌರರೇ ಸ್ವಲ್ಪ ಯೋಚಿಸಿ ನೋಡಿ. ಗುಮಾಸ್ತನ ದುಡ್ಡಿಗೆ ಬೆಲೆ ಇಲ್ಲವಾಗಿದೆ. ಬಾಡಿಗೆ ಬಿಸಾಕಿ ಮಾತನಾಡಿ ಎನ್ನುತ್ತಾರೆ ಮನೆಯ ಮಾಲಿಕರು. ದಿನ ಬೆಳಗಾದರೆ ನೀರು ಜಾಸ್ತಿ ಖರ್ಚಾಗುತ್ತಿದೆ, ಲೈಟು ಹೆಚ್ಚು ಉರಿಸುತ್ತೀರಿ ಎಂದು ಕಿರುಕುಳ ಕೊಡುತ್ತಾರೆ. ಮುಸುರೆ ತಿಕ್ಕುವ ಒಕ್ಕಲುಗಿತ್ತಿ ಸಹ "ಏನಯ್ಯ ನೀನು ಕೊಡೊ ಮೂರು ರೂಪಾಯಿ ಪುಡಿಕಾಸಿಗೆ ಯಾವ ಮೂಳಿ ನಿನ್ನ ಮನೆಯಲ್ಲಿ ಕೆಲಸ

ಮಾಡುತ್ತಾಳೆ. ಕಾಗೆ ತಿನ್ನೋಕೆ ಎರಡು ಅಗುಳು ಬಿಡೋಲ್ಲ" ಎಂದು ಮೂದಲಿಸುತ್ತಾಳೆ. ಸೌದೆ—ಅದರ ವಿಚಾರ ಏಕೆ ಹೇಳೋಣ. ಸೌದೆ ಕೊಟ್ಟವನಿಗೆ ಒಂದು ರೂಪಾಯಿ. ಕೊಡಿಸಿದವನಿಗೆ ಎರಡಾಣೆ. ಹೊತ್ತು ತಂದವನಿಗೆ ಮೂರಾಣೆ. ಕೊನೆಗೂ ಗುಮಾಸ್ತನಿಗೆ ಉಳಿದದ್ದೇನು? ಹಸಿ ಸೌದೆ, ಹೊಗೆ, ಕಣ್ಣೀರು, ಹಂಜಕ್ಕಿ ಅನ್ನ.

ಮೊನ್ನೆ ನನ್ನ ಸ್ನೇಹಿತರೊಬ್ಬರು ತಾವು ರೇಷನ್ ಡಿಪೊ, ಸೌದೆ ಡಿಪೋಗಳ ಮುಂದೆ ಕಾಯಬೇಕಾಗಿರುವುದರಿಂದ ತಿಂಗಳಿಗೆ ಎಂಟು ದಿನ ಮಧ್ಯಾಹ್ನ ಎರಡು ಗಂಟೆಯವರೆಗೆ ರಜಕೊಡಿ ಎಂದು ಅರ್ಜಿ ಹಾಕಿದ್ದರು!

ತಲಾ ಐದು ಗಜ ಬಟ್ಟೆ ಕೊಟ್ಟು ಅದರಲ್ಲಿ ಕೋಟು ಪೇಟ ಸೂಟು ಮಾಡಿಕೊಂಡು ಬನ್ನಿ ಎಂದರೆ ಗುಮಾಸ್ತರ ಗತಿ ಏನು ಸ್ವಾಮಿ! ನಾಳೆ ಅವರು ಗಾಂಧೀಜಿ ಹಾಗೆ ತುಂಡು ಬಟ್ಟೆಯಲ್ಲಿ ಕಛೇರಿಗೆ ಬರಬಾರದೇನು?

ಮುಖ್ಯವಾಗಿ ಬಾಂಧವರೇ, ಒಂದು ಮಾತು ಮಾತ್ರ ವೇದವಾಕ್ಯ ದಂತೆ ನಿತ್ಯ ಸತ್ಯವಾದದ್ದು ನೋಡಿ. ಪ್ರಪಂಚದಲ್ಲಿರುವ ಜನರನ್ನೆಲ್ಲ ಎರಡು ಭಾಗ ಮಾಡಬಹುದು; ಮಾರುವವರು ಮತ್ತು ಕೊಳ್ಳುವವರು ಎಂದು. ಗುಮಾಸ್ತರು, ಶಾಲಾ ಮಾಸ್ತರು ಇಂಥವರೆಲ್ಲ ಕೇವಲ ಕೊಳ್ಳುವವರು. ಇತರರೆಲ್ಲ ಮಾರುವವರು. ಮಾರುವವನಿಗೆ ಯುದ್ಧದ ಬಿಸಿ ತಗಲಲಿಲ್ಲ. ಅಂದ್ರೆ, ಆತನಿಗೆ ಲಾಭ ಒಂದಕ್ಕೆ ಎರಡರಷ್ಟಾಗಿದೆ. ಆದರೆ ಕೊಳ್ಳುವವನಿಗೆ ವರಮಾನ ಹೆಚ್ಚಾಗಿಲ್ಲ.

ನಿನ್ನೆ ಬೆಳಿಗ್ಗೆ ನಾನು ಒಂದು ಗಾಡಿ ಇಟ್ಟಿಗೆ ಹೋಗುತ್ತಿದ್ದುದನ್ನು ನೋಡಿದಾಗ ನನಗೆ ಏನೇನು ಭಾವನೆಗಳು ಬಂದುವು ಗೊತ್ತೆ? "ಪ್ರಜಾ ಸರ್ಕಾರ ಏರ್ಪಡಬೇಕು. ಪ್ರತಿಯೊಬ್ಬ ಪ್ರಜೆಗೂ ಇರುವುದಕ್ಕೆ ಮನೆ, ತಿನ್ನಲು ಆಹಾರ, ಉಡಲು ಬಟ್ಟೆ, ಕೆಲಸಕ್ಕೆ ತಕ್ಕ ವೇತನ ಇಷ್ಟೂ ಸಿಗುವ ಕಾಲ ಬೇಗನೆ ಬರಬೇಕು. ಬರಬೇಕು. ಇದು ಇಂದಲ್ಲ ನಾಳೆ ಆಗಿಯೇ ಆಗುತ್ತೆ. ಇವತ್ತು ನನ್ನ ಹೃದಯದ ಈ ವೇದನೆ ನಾಳೆ ರೂಪುಗೊಂಡು ನಿಲ್ಲುತ್ತದೆ. ಅಂದು ನೋಡಿ ಎಷ್ಟು ಗಾಡಿಗಳಲ್ಲಿ ಎಷ್ಟು ಇಟ್ಟಿಗೆಗಳು ಹೋಗುತ್ತವೆ ಎಂದು. ರಸ್ತೆಯಲ್ಲಿ ಎಲ್ಲಿ ನೋಡಿದರೂ ಗಾಡಿ ಗಾಡಿ ಇಟ್ಟಿಗೆ. ಹೆಚ್ಚು ಬೇಡ, ಪ್ರತಿ ಸಂಸಾರಕ್ಕೂ ಒಂದು ಸೂರು, ಒಂದು ಕೋಣೆ,

ಅಡಿಗೆ ಮತ್ತು ಊಟದ ಮನೆ, ಒಂದು ಸ್ನಾನದ ಮನೆ, ಇಷ್ಟು ಸಾಕು. ಅಷ್ಟಾದರೂ ಸಿಗಬೇಕು. ಅದು ನಮ್ಮ ಹಕ್ಕು. ಸರ್ಕಾರ ಅದನ್ನು ಮಾಡಬೇಕು.

ನಾವಿರೋ ಮನೆ ನೋಡಿ. ಇದ್ದಲಿನಲ್ಲಿ ಮಾತ್ರ ಅಡಿಗೆ ಮಾಡ ಬೇಕು. ಇದ್ದಲು ಸಿಕ್ಕದಿದ್ದರೆ ಬೇರೆಯೇ ಬೇಯುವುದಿಲ್ಲ. ಹೊಗೆ ಹೋಗಲು ಜಾಗವೇ ಇಲ್ಲ. ಸ್ನಾನದ ಮನೆ ಇಬ್ಬರಿಗೆ ಸೇರಿದೆ. ಪಕ್ಕದ ಒಕ್ಕಲು ತಮ್ಮ ಹಂಡೆಯನ್ನು ನಮ್ಮ ಹಂಡೆಯ ಪಕ್ಕದಲ್ಲಿ ಇಟ್ಟಿದ್ದಾರೆ. ಇಬ್ಬರೂ ಅಲ್ಲೇ ಸ್ನಾನ ಮಾಡಬೇಕು. ಅವಸರವಾದಾಗ ಬಾಗಿಲು ಹಾಕಿಕೊಂಡು ಅವರ ಹಂಡೆಯ ನೀರನ್ನು ಇವರು ಸ್ನಾನಮಾಡಿಬಿಡು ತ್ತಾರೆ. ಇವರ ಸೌದೆಯನ್ನು ಅವರು ಉರಿಸಿಬಿಡುತ್ತಾರೆ. ಅವರಿಗಿಂತ ಇವರೇ ಮೊದಲು ಸ್ನಾನಮಾಡಿಬಿಡುತ್ತಾರೆ. ಅಂತೂ ಸೂರ್ಯ ಹುಟ್ಟಿ ಸೂರ್ಯ ಮುಳುಗುವುದರಲ್ಲಿ ನಾಲ್ಕು ಸಾರಿಯಾದರೂ ಜಗಳದ ಮಾತು ಬಂದೇ ಬರುತ್ತದೆ. ಮನೆಗೆ ಮೂರನೆಯವರು ಯಾರಾದರೂ ಬಂದರೆ ಅವರಿಗೆ ಮಲಗಲು ಸ್ಥಳವಿಲ್ಲ. ಅವರು ಕಟ್ಟೆಯ ಮೇಲೆ ಅಡ್ಡಾಗಬೇಕು. ಮನೆ ಮಡಿ ಮೈಲಿಗೆಗಂತೂ ಬರುವಂತೆಯೇ ಇಲ್ಲ. ಇಷ್ಟಾದರೂ' ಮನೆಯ ಯಜಮಾನರ ಮಾತಿನ ವೈಖರಿಯನ್ನು ಏನಂತ ವರ್ಣಿಸುವುದು! ನಮಗೇ ಅಂತ ಅದನ್ನ ಅಷ್ಟು ಸುಲಭ ಬೆಲೆಗೆ ಕೊಟ್ಟಿವಾನಂತೆ. ಈಗಿನ ಕಾಲದಲ್ಲಿ ಅದಕ್ಕೆ ಇಪ್ಪತ್ತೈದಾದರೂ ರಾಮ ರಾಮಾ ಅಂತ ಸಿಗುತ್ತಂತೆ. ಆಗಲಿ, ಆಗಲಿ. ಅವರು ಎಷ್ಟು ದಿನ ಹಾಗಂದಾರು. ನಿನ್ನೆ ಬೆಳಗ್ಗೆ ಒಂದು ಗಾಡಿ ಇಟ್ಟಿಗೆ ಹೋಗುತ್ತಿದ್ದುದನ್ನು ಅವರು ಮರೆತಂತೆ ಕಾಣುತ್ತದೆ.

ನನಗೆ ಅಷ್ಟು ಸುಲಭ ಬಾಡಿಗೆಗೆ ಮನೆ ಸಿಕ್ಕುಬಿಟ್ಟಿತಲ್ಲಾ ಅಂತ ನೀವು ಈಗ ಅಸೂಯೆ ಪಡುತ್ತಿರಬಹುದು. ಆದರೆ ನಾನು ಮನೆ ಗಾಗಿ ಮಾಡಿದ ಮಸಲತ್ತು, ಪಟ್ಟ ಕಷ್ಟ, ಹಾಕಿದ ಮಾಯ ಇವನ್ನೆಲ್ಲ ನೋಡಿದರೆ ನೀವು ಆಗ ನಿಟ್ಟುಸಿರು ಬಿಟ್ಟೀರಿ. ಮನೆಗಾಗಿ ಒಂದು ವರ್ಷ ಕಾದಿದೇನೆ. ಮತ್ತು ಬೆಂಗಳೂರಿನ ಬಡಾವಣೆಗಳ ಗಲ್ಲಿ ಗಲ್ಲಿಗಳನ್ನು ಅಲೆದಿದೇನೆ. ಆ ಪಂಚಾಯತಿಗೆಯನ್ನು ಹೇಳುತ್ತ ಕುಳಿತರೆ ಒಂದು ಬೃಹತ್ ಪುರಾಣವೇ ಆದೀತು.

ಒಬ್ಬರ ಮನೆಗೆ ಹೋದೆವು, ಮನೆ ಬಾಡಿಗೆಗೆ ಕೇಳುವುದಕ್ಕಾಗಿ! ದೊಡ್ಡ ಕಾಂಪೌಂಡಿನಲ್ಲಿ ಒಂದೇ ಮನೆ ಇತ್ತು. ಹಳೆಯ ಮನೆ. 'ಸುಂದರ ವಿಲ್ಲ' ಎಂತ ಬೋರ್ಡು ಬೇರೆ ನೇತಾಡುತ್ತಿತ್ತು. ಆದರೂ ಪರವಾಗಿಲ್ಲ ಅಂತ ಒಳಹೊಕ್ಕು ವಿಚಾರಿಸಿದರೆ ಆ ಮನೆಯಲ್ಲಿ ಹತ್ತು ಸಂಸಾರಗಳು ಬಾಡಿಗೆಗೆ ಇರುವುದಾಗಿಯೂ, ಇನ್ನ ಒಂದು ಸಾಸಿವೆಕಾಳು ಹಾಕಲು ಕೂಡ ಸ್ಥಳ ಸಿಗಲಾರದೆಂಬುದಾಗಿಯೂ ಉತ್ತರ ಬಂತು. ಇರುವ ಒಂದು ಮನೆಗೆ ಹತ್ತು ಬಾಗಿಲುಗಳನ್ನಿಟ್ಟು ಅರವತ್ತು ಜನಕ್ಕೆ ಅಲ್ಲಿ ಆಶ್ರಯಮಾಡಿದ್ದರು. ನಾವು ಪೆಚ್ಚುತಿಂದು, ಈ ಮನೆಗೆ 'ಸುಖವಿಲ್ಲ' ಅಂತ ಏಕೆ ಬೋರ್ಡು ಹಾಕಬಾರದು ಎಂದು ನಗುತ್ತಾ ಹಿಂತಿರುಗಿದೆವು.

ಮೊನ್ನೆ ಪ್ರಜಾಪ್ರತಿನಿಧಿಸಭೆಯ ಅಧಿವೇಶನದಲ್ಲಿ ಯಾರೋ ಉಗ್ರವಾಗಿ ಮಾತನಾಡಿದರು. ಇದು ಕೂಲಿಗಾರರ ಯುಗ, ಇದು ಬಡ ರೈತನ ಯುಗ. ಸರ್ಕಾರ ಅವರ ಹಕ್ಕು ಬಾಧ್ಯತೆಗಳನ್ನು ರಕ್ಷಿಸಬೇಕು ಎಂದು. ನನಗೆ ಹೃದಯ ಚೂರಾಗುವಷ್ಟು ವ್ಯಥೆಯಾಯಿತು. ಅನಿಸಿತು ಇದು ಗುಮಾಸ್ತರ ಯುಗ ಎಂದು. ವಿದ್ಯಾಲಯದಲ್ಲಿ ಡಿಗ್ರಿಪಡೆದ ನೂರು ಮಂದಿಯಲ್ಲಿ ತೊಂಬತ್ತುಜನ ಗುಮಾಸ್ತರಾಗುತ್ತಿದ್ದಾರೆ. ಇದು ಗುಮಾಸ್ತರ ಯುಗ. ಗುಮಾಸ್ತನಿಂದ ಕಛೇರಿ. ಕಛೇರಿಗಳಿಂದ ಸರ್ಕಾರ. ಆದ್ದರಿಂದ ನಮ್ಮ ಪ್ರತಿನಿಧಿಗಳು ನಮ್ಮ ವಿಚಾರವನ್ನು ಪರಿಶೀಲಿಸಬೇಡವೆ? ನಮಗೇನು ಬಾಯಿ ಇಲ್ಲವೆ? ನಮಗೆ ಹೊಟ್ಟೆ ಇಲ್ಲವೆ? ನಮಗೆ ಶಕ್ತಿ ಇಲ್ಲವೆ? ನಾವೂ ಕೂಗಬಲ್ಲೆವು. ನಮಗೆ ಅನ್ನ ಬೇಕು. ನಮಗೆ ಬಟ್ಟೆ ಬೇಕು. ನಮಗೆ ಮನೆ ಬೇಕು.

ಮನೆ ಬೇಕು.

ನಿನ್ನೆ ಬೆಳಗ್ಗೆತಾನೆ—ಬಾಂಧವರೇ, ನಾನು ಕಣ್ಣಾರ ನೋಡಿದೆ—ಒಂದು ಗಾಡಿ ಇಟ್ಟಿಗೆ ಹೋಗುತ್ತಿತ್ತು! ಆ ಕ್ಷಣದಿಂದ ತಾಯನುಳಿದ ಕರುವಿನಂತೆ ನನ್ನ ಜೀವ ಬಡಿದುಕೊಳ್ಳುತ್ತಿದೆ—ಮನೆಗಾಗಿ!!



# ಮರವು

"ಮರೆತು ಹೋಯಿತಂತೆ, ಮರೆತು. ಮರೀದೆ ಏನು ಆಗುತ್ತೆ? ಊಟ ಮಾಡೋದು ಮರೆಯೊಲ್ಲ. ತಿಂಡಿ ತಿನ್ನೋದು ಮರೆಯೊಲ್ಲ. ನಿದ್ರೆ ನೀರಡಿಕೆ ಮರೆಯೊಲ್ಲ. ಮುಖ್ಯವಾಗಿ ಮಾಡಬೇಕಾದ ಕೆಲಸ ಮಾತ್ರ ಆಕಸ್ಮಾತ್ ಮರೆಯುತ್ತೆ ಅಲ್ಲ!"

ಹಾಗಲ್ಲ ಸಾರ್. ಅಷ್ಟು ಉಗ್ರರಾಗ ಬೇಡಿ. ಸ್ವಲ್ಪ ಕೇಳಿ. ಒಂದೆರಡು ಉದಾಹರಣೆ ಕೊಡುತ್ತೇನೆ.

ಮಸಲಾ ಈಗಿನ ವಿದ್ಯಾಭ್ಯಾಸ ಕ್ರಮ ಅನ್ನಿ. ಒಟ್ಟು ವಿದ್ಯಾಭ್ಯಾಸದ ಎಲ್ಲ ಪರೀಕ್ಷೆಗಳಲ್ಲೂ ಅತಿ ಕಷ್ಟದ್ದೆಂದರೆ ಈ ಇಂಟರ್‌ಮೀಡಿಯೆಟ್ ಪರೀಕ್ಷೆ. ಮುದುಕರು ಇಂಟರ್ ಪರೀಕ್ಷೆಯ ಮೇಲೆ ನವೀನ ಗಾದೆಯೊಂದನ್ನೇ ಮಾಡಿದ್ದಾರೆ. ಎಂಟು ವರ್ಷಕ್ಕೆ ನನ್ನ ಮಗ ಇಂಟರ್ ಮಾಡಿದ ಎಂದವರು ನಿಟ್ಟುಸಿರು ಬಿಡುತ್ತಾರೆ. ಹುಡುಗರು ಹೀಗೆ ಫೇಲ್ ಆಗಲು ಏನು ಕಾರಣ? ಓದಿರುತ್ತಾರೆ, ಹಗಲೂ ರಾತ್ರಿ ಉರು ಹಾಕಿರುತ್ತಾರೆ. ಆದರೂ ಪರೀಕ್ಷೆಗೆ ಕುಳಿತಾಗ ತಲೆ ಖಾಲಿ ಆಗುತ್ತೆ. ಕೆರೆದರೂ ವಿಷಯ ಉದುರುವುದಿಲ್ಲ. ಬೆಳಗ್ಗೆ ನೆನಸುತ್ತಿದ್ದ ವಿಷಯ ಮಧ್ಯಾಹ್ನ ಮರೆತು ಹೋಗಿರುತ್ತದೆ. ಇದಕ್ಕೇನು ಕಾರಣ?

ಇನ್ನ ಮನೆಯಲ್ಲಿ ನೋಡಿ ನೀವು ಹೇಳಿದ ಹಾಗೆ ಕಾಫೀನ ಹೆಂಡ್ತಿ ಬೇಗ ಮಾಡಲಿಲ್ಲ, ಉಪ್ಪಿಟ್ಟಿಗೆ ನೀರುಳ್ಳಿ ಹಾಕಲಿಲ್ಲ ಎಂಬ ವಿಚಾರಗಳೆಲ್ಲ ನೆನಪಿದ್ದರೂ, ಹೆಂಡತಿ ಕೇಳಿದ ವಿಚಾರ ಮರೆತು ಹೋಗಿರುತ್ತೆ. ಅವಳು ಹೇಳಿದ ಬಳೆಗಳ ವಿಚಾರ ಜ್ಞಾಪಕಕ್ಕೆ ಬರುವುದಿಲ್ಲ. ಇದಕ್ಕೇನೆಂದು ಹೇಳೋಣ!

"ಸಾಕು ಸುಮ್ಮನಿರಿ ಅಂದ್ರೆ. ನಿಮ್ಮ ಹಾಸ್ಯವೇ ನಿಮಗೆ. ವಿಚಾರ ಮಾಡ್ರಿ. ಮರವು ಅಂದ್ರೆ ಏನ್ರಿ? ಯಾತಕ್ರೀ ಮರೀಬೇಕು. ನನ್ನ ಕೈಲಿ ಆಗಲಿಲ್ಲ ಎಂದರೆ ಆದೊಂದು ತರಹ. ಅದಿಲ್ಲದೆ ಮೋಸಕ್ಕಾಗಿ ಮರೆತುಬಿಟ್ಟೆ ಎಂದ್ರೆ ಸಿಟ್ಟು ಬರೊಲ್ಲವೆ? ಏನ್ರಿ ಮರವು ಅಂದ್ರೆ............"

ಮರವು ಎನ್ನೋದನ್ನ ಹೇಗೆ ವರ್ಣಿಸೋದು? ಅದಕ್ಕೇನು ಡೆಫನಿಷನ್? ಪದಾರ್ಥವಾದರೆ ಹೀಗೆ ಹೀಗೆ ಎಂದು ವರ್ಣಿಸಿ ಹೇಳ ಬಹುದು. ಅದೂ ಕಷ್ಟ. ಇಲಿ ಅಂದ್ರೆ ಏನು ಹೇಳಿ ನೋಡೋಣ. ಇಲಿ ಎಂದರೆ ಏನ್ರೀ? ಬೆಕ್ಕನ್ನು ಕೇಳಿದರೂ ಸಹ ನನಗೆ ಗೊತ್ತಿಲ್ಲ ಅನ್ನುತ್ತೆ. ಇಲಿ ಅಂದ್ರೆ ಬೆಕ್ಕು ಹಿಡಿದು ಹಿಂಸಿಸಿ ಕೊಂದು ತಿನ್ನುವ ಪ್ರಾಣಿ ಎಂದು ವಿವರಿಸಬಹುದು. ಹಾಗೆಯೇ ಮರವು ಎಂದರೆ ಮರೆತು ಹೋದದ್ದು, ನೆನಪಿಲ್ಲದ್ದು, ಜ್ಞಾಪಕಕ್ಕೆ ಬಾರದ್ದು ಎಂದಿಷ್ಟು ಹೇಳಬಹುದು ನೋಡಿ.

"ನಾನು ಕೇಳ್ತಾ ಇರೋದು ಅದರ ಡೆಫನಿಷನ್ ಅಲ್ಲ ಸಾರ್. ನನ್ನ ಮಾತೇ ಬೇರೆ, ನಿಮ್ಮ ಮಾತೇ ಬೇರೆ." ಮನುಷ್ಯ ಮರೆಯುತ್ತಾನೆ ಅಂದರೆ ಎಲ್ಲವನ್ನೂ ಅವನು ಏತಕ್ಕೆ ಮರೆತು ಬಿಡೊಲ್ಲ? ತನ್ನ ಸುಖ ಮರೆಯೋಲ್ಲ, ಇತರರ ಕಷ್ಟ ಮರೆತುಹೋಗಿರುತ್ತೆ. ಕೊಟ್ಟ ಸಾಲ ರೂಪಾಯಿ ಆಣೆ ಕಾಸು ಆದಿಯಾಗಿ ಉರು ಹಾಕಿರುತ್ತಾನೆ. ಕೊಡ ಬೇಕಾದದ್ದು ಎಷ್ಟೋ ಗೊತ್ತಿರೊಲ್ಲ. ಸಾಲದ ಪದಾರ್ಥಗಳು, ಓದಿ ಕೊಡು ತ್ತೀನೆಂದು ಎರವಲಾಗಿ ಪಡೆದ ಪುಸ್ತಕಗಳು ಇವೆಲ್ಲ ತಲೆಯಲ್ಲಿ ಇರುವುದೇ ಇಲ್ಲ. ತನ್ನ ಹರಕು ಕೊಡೆಯನ್ನು ಬಿಟ್ಟು ಇನ್ನೊಬ್ಬರ ಹೊಸ ಛತ್ರಿ ಯನ್ನು ಕೊಂಕಳಿಗೆ ಏರಿಸಿ ಹೊರಡುವಾಗ ಅರುಳು ಮರುಳಾಗಿರುತ್ತೆ

ಅಲ್ವೆ. ಲೇಖನ ಬೇಕು ಎಂದು ಮೂರು ಮೂರು ಸಲ ಕೇಳುವುದಕ್ಕೆ ಜ್ಞಾಪಕವಿರುತ್ತದೆ, ಲೇಖನ ಅಚ್ಚಾದ ಮೇಲೆ ಅದರ ಒಂದು ಪ್ರತಿಯನ್ನು ಕಳುಹಿಸುವುದು ಆಗಲೇ ಮರೆತುಹೋಗಿರುತ್ತೆ! ವಿಷಯ ಜ್ಞಾಪಕವಾಗಲಿ ಅಂತ ಒಬ್ಬ ತನ್ನ ಕರ ವಸ್ತ್ರಕ್ಕೆ ಒಂದು ಗಂಟು ಹಾಕಿಕೊಂಡನಂತೆ. ಮಾಮೂಲಿನಂತೆ ವಿಷಯ ಮರೆತುಹೋಯ್ತು. ಅದು ಜ್ಞಾಪಕವಾಗಲಿ ಎಂದು ಕರವಸ್ತ್ರಕ್ಕೆ ಮತ್ತೊಂದು ಗಂಟು ಹಾಕಿದನಂತೆ. ನಾವೇನಾದರೂ ಹೀಗೆ ಮಾಡಲು ಪ್ರಾರಂಭಿಸಿದರೆ ಬಹುಶಃ ವಸ್ತ್ರವೆಲ್ಲ ಕಗ್ಗಂಟಾಗಿ ಬಿಡುತ್ತೆ. ಕೂತಲ್ಲೆ ಕಾಲು ಮರೆಯುವ ಜಾತಿ ನಮ್ಮದು ಎಂದು ಅಜ್ಜ ಹಾಸ್ಯ ಮಾಡ್ತಾ ಇದ್ರು. ಅವರನ್ನು' ನೋಡಿ—ಅವರು ಆಫೀಸಿಗೆ ಸೇರಿದ ದಿನದಿಂದ ಹಿಡಿದು ರಿಟೈರ್ ಆಗುವವರೆಗೆ ನಡೆದ ಚರಿತ್ರೆ(!)ಯನ್ನೆಲ್ಲಾ ಡೇಟ್‌ವಾರ್ ಹೇಳುತ್ತಾರೆ. ಅವರು ತಾಪೆದಾರಿ ಮಾಡಿದ ಆಫೀಸರುಗಳು, ಸರ್ಕ್ಯೂಟು ಹೋಗಿ ಬಂದ ಸ್ಥಳಗಳು, ತಾವು ಆಫೀಸರಿಗೆ ದಬಾಯಿಸಿದ ಸನ್ನಿವೇಶಗಳು ಎಲ್ಲವನ್ನೂ ಅವರು ಇಂದಿಗೂ ನೆನಪಿಟ್ಟಿದ್ದಾರೆ. ಅದೇ ನಮ್ಮನ್ನು ಕೇಳಿ. ಟೆಕ್ಸ್ಟ್‌ಬುಕ್ ಹೆಸರೇ ನಮಗೆ ಗೊತ್ತಿರುವುದಿಲ್ಲ. ಇವತ್ತಿನ ಪರೀಕ್ಷೆಗೆ ನಾಳೆ ಹೋಗುತ್ತೇವೆ. ನಮ್ಮ ಕ್ಲಾಸನ್ನು ಬಿಟ್ಟು ಬೇರೆ ಕ್ಲಾಸಿಗೆ ಹೋಗಿರುತ್ತೇವೆ. ಪುಸ್ತಕವನ್ನೇ ತರಗತಿಗೆ ಒಯ್ದಿರುವುದಿಲ್ಲ. ಮರೆತು ಶಾಲೆಯನ್ನೇ ಮನೆ ಎಂದು ತಿಳಿದು ನಿದ್ರೆ ಮಾಡಿಬಿಡುತ್ತೇವೆ. ಹೋಟಲಿನ ತಿಂಡಿ ತಿಂದರೆ ಬಿಲ್ ಕೈನಲ್ಲೆ ಇರುತ್ತಾದರೂ ದುಡ್ಡು ಕೊಡುವುದೇ ನೆನಪಾಗುವುದಿಲ್ಲ. ಹೀಗಿದೆ ವಿಷಯ.

"ಸ್ವಲ್ಪ ಸೀರಿಯಸ್ಸಾಗಿ ಮಾತನಾಡಿ ಅಪ್ಪ. ಒಂದು ಗಳಿಗೇನಾದರೂ ಹಾಸ್ಯ ಬಿಟ್ಟು ಇರಿ ನೋಡೋಣ. ನಮ್ಮ ಜನಾನ ನೋಡಿ ನಾನು ಮರುಗುತಾ ಇದ್ರೆ ನೀವು ನಗತಾ ಇದೀರಿ........"

ಇಲ್ಲ. ಯಾರು ನಗತಾ ಇರೋರು, ನಮ್ಮ ಜನಾನ ನಾನು ಹೊಗಳತಾ ಇದೀನಿ. ಮರವು ಮಾನವನ ಜನ್ಮ ಸಿದ್ಧವಾದ ಹಕ್ಕು. ದೈವದತ್ತವಾದ ವರ. ಅದನ್ನು ಬಿಟ್ಟು ನಾವು ನೆನಪಿನ ಕಡೆ ಓಡುತ್ತಿದ್ದೇವೆ. ನೆನಪೇ ಜೀವನ; ಮರವೇ ಸಾವು. ನೆನಪೇ ನರಕ; ಮರವೇ ಸ್ವರ್ಗ. ಅದನ್ನೇ ಇತರರು Bliss ಎಂದು ಕರೆಯುತ್ತಾರೆ.

ಇದನ್ನರಿತ ನಮ್ಮ ಋಷಿಗಳು ಜೀವನವನ್ನು ಮರೆಯಲು ಕಾಡನ್ನು ಸೇರುತ್ತಿದ್ದರು. ಜ್ಞಾನಿಯಾದವನು ಎಲ್ಲವನ್ನೂ ತಿಳಿದಿರುವುದಿಲ್ಲ, ಎಲ್ಲವನ್ನೂ ಮರೆತಿರುತ್ತಾನೆ. ಅದಕ್ಕೇ ದೇವರನ್ನು ಕುರಿತು ಪ್ರಶ್ನೆ ಮಾಡಿದರೂ ಸಹ ಅವನು ಮೌನವಾಗಿದ್ದು ಬಿಡುತ್ತಾನೆ........

"ಓ ಹೋ ಹೋ ಸಾಕು ಸಾಕು ನಿಮ್ಮ ಪುರಾಣ. ಸಧ್ಯ ಮರೆತೇ ಬಿಟ್ಟಿದ್ದೆ. ಡಬ್ಬಿ ಖಾಲಿಯಾಗಿದೆ. ನಶ್ಯ ತರೋಣ ಬನ್ನಿ. ಇದ್ದೇ ಇದೆ ನಮ್ಮ ಮಾತು."

ನಶ್ಯ ಏನೋ ತಗೊಳ್ಳಿ, ಆದರೆ ನನಗೊಂದು ಸಿಗರೇಟು ತರುವುದನ್ನು ಮರೆಯಬೇಡಿ!

# ಹರಿಶ್ಚಂದ್ರನ ಸೋಲು

ಎರಡನೆಯ ಮಹಾಯುದ್ಧ ಪ್ರಾರಂಭವಾದ ಮೇಲೆ ಸತ್ಯ ಧರ್ಮ, ಕರ್ಮ, ಕರ್ತವ್ಯ, ಪೌರನೀತಿ, ರಾಜನೀತಿ ಮೊದಲಾದ ವಿವಿಧ ವಿಷಯಗಳ ಪ್ರಸಾರ, ಪ್ರಚಾರ ಪ್ರಬಲವಾಗುತ್ತಿರುವುದು ನಮಗೆಲ್ಲ ತಿಳಿದ ವಿಷಯವೇ ಆಗಿದೆ. ಎರಡು ರಾಷ್ಟ್ರಗಳಿಗೆ ಘೋರವಾದ ಯುದ್ಧ ನಡೆಯುತ್ತಿರುವಾಗ ಯಾರಿಗೆ ಗೆಲುವು ಯಾರಿಗೆ ಸೋಲು ಎನ್ನುವುದನ್ನು ನಿರ್ಧರಿಸಿ ಹೇಳುವುದು ಕಷ್ಟ. ಒಂದುವೇಳೆ ತ್ರಿಕಾಲ ಜ್ಞಾನಿಯಾದವರು ಒಬ್ಬಿಬ್ಬರು ಭವಿಷ್ಯದ ಅಂತರಾಳವನ್ನರಿತು ಇಂಥವರಿಗೇ ಜಯ ಸಿದ್ಧ ಎಂದು ಹೇಳಲು ಪ್ರಯತ್ನಿಸಬಹುದು. ಆದರೆ ಆ ಸತ್ಯವನ್ನು ಹೇಳಿ ಬದುಕುವುದು ಕಷ್ಟದ ಮಾತಾದೀತು. ಇಲ್ಲವೆ ಸ್ವಲ್ಪ ನಮ್ರವಾಗಿ ಹೇಳುವುದಾದರೆ ಸೋಲು ಗೆಲುವು ನಮ್ಮ ಕೈಲಿ ಇಲ್ಲವಾದರೂ ಕೊನೆಗೆ ಸತ್ಯಕ್ಕೇ ಜಯ, ಸತ್ಯಕ್ಕೇ ಸುಖ ಎಂದು ಹೇಳಬಹುದು. ಅಂದರೆ ಸತ್ಯಕ್ಕೆ ಜಯವಾಗದಿದ್ದರೂ ಗೆದ್ದವರಲ್ಲಿ ಸತ್ಯವಿದೆ ಎಂದು ಹೇಳಿಬಿಡಬಹುದಲ್ಲ! ಅಲ್ಲವೆ. ಸತ್ಯವು ಅವರಲ್ಲಿಲ್ಲದಿದ್ದರೂ ಸತ್ವ ಇದೆ ಎನ್ನುವುದನ್ನಾದರೂ ಒಪ್ಪಬಹುದಲ್ಲ!

ಇದನ್ನೆಲ್ಲ ನಿಂತು ಯೋಚಿಸಿದ ಹರಿಶ್ಚಂದ್ರರಾಯ. ನಿಂತದ್ದು ಮಾರ್ಕೆಟ್ ಚೌಕದಲ್ಲಿ. ಎದುರಿಗೆ ಭವಿಷ್ಯಕ್ಕಾಗಿ ಉಳಿಸಿರಿ, ನ್ಯಾಷನಲ್ ಸೇವಿಂಗ್ ಸರ್ಟಿಫಿಕೇಟುಗಳನ್ನು ಕೊಂಡು ಯುದ್ಧಕ್ಕೆ ಸಹಾಯಮಾಡಿರಿ ಎಂದು ಮುಂತಾಗಿ ಬರೆದ ಬೋರ್ಡುಗಳು. ಯೋಚನೆಗೆ ಬಂದುದು ಸತ್ಯಾಸತ್ಯದ ವಿಷಯ.

ಅಂದುಕೊಂಡ – ಕಡೆಗೂ ಸತ್ಯ ಮತ್ತು ಧರ್ಮಕ್ಕೇ ಜಯ – ಎಂದು. ಹಿಂದೆ ಪುರಾಣ ಕಾಲದಲ್ಲಿ ಹರಿಶ್ಚಂದ್ರನಿಗೂ ವಿಶ್ವಾಮಿತ್ರನಿಗೂ ಯುದ್ಧ

ನಡೆಯಿತಷ್ಟೆ. ಆ ಯುದ್ಧದಲ್ಲಿ ಹರಿಶ್ಚಂದ್ರನು ಪಡಬಾರದ ಕಷ್ಟಗಳನ್ನು ಅನುಭವಿಸಿದನು. ಆದರೂ ಕೊನೆಯಲ್ಲಿ ಗೆದ್ದುದು ಅವನೇ. ಸ್ಮಶಾನವನ್ನು ಕಾಯುತ್ತಿದ್ದ ಆ ಬಡಪಾಯಿಯು ಜಯಶೀಲನಾಗುವನೆಂದು ಯಾರು ತಿಳಿದಿದ್ದರು? ಇದು ಏನನ್ನು ತೋರಿಸುತ್ತದೆ ಎಂದರೆ ಒಂದು ದೃಷ್ಟಿಯಿಂದ ದೇವರು ಧರ್ಮ ಸಂಸ್ಥಾಪನೆಗಾಗಿ ಆಗಾಗ ಪ್ರಯತ್ನ ಪಡುತ್ತಿದ್ದಾನೆ ಎಂದು. ತನ್ನ ಇಂದಿನ ಹೆಸರೂ ಹರಿಶ್ಚಂದ್ರ ಎಂದು. ತಾನಿರುವುದು ಕಲಿಯುಗದಲ್ಲಿ. ತನ್ನವರು ತನಗೆ ಆ ಹೆಸರನ್ನು ಯಾವ ಉದ್ದೇಶದಿಂದ ಇಟ್ಟರೋ ಈಗ ಯೋಚಿಸುವುದು ಅನಾವಶ್ಯಕ. ಆದರೆ ಇಟ್ಟ ಹೆಸರನ್ನು ಸಾರ್ಥಕ ಮಾಡಿಕೊಳ್ಳುವುದು ತನ್ನ ಪ್ರಥಮ ಕರ್ತವ್ಯವಲ್ಲವೆ?

ಹರಿಶ್ಚಂದ್ರ ಅಂದು ೧೯೪೦ರ ಒಂದು ದಿನದಲ್ಲಿ ಮಾರ್ಕೆಟ್ಟಿನ ಜನಭರಿತವಾದ ಚೌಕಮಧ್ಯದಲ್ಲಿ ಈ ನಿರ್ಧಾರಕ್ಕೆ ಬಂದ – ಇನ್ನು ಮುಂದೆ ತಾನು ಬರೀ ಎಂ. ಪಿ. ಹರಿಶ್ಚಂದ್ರನಲ್ಲ, ಸತ್ಯ ಹರಿಶ್ಚಂದ್ರ ಎಂದು. ಹಿಂದೆ ತಾನು ಶಾಲೆಯಲ್ಲಿ ಒಂದೆರಡು ಸಲ ನಿಜ ಹೇಳಲು ಯತ್ನಿಸಿದಾಗ ಮೇಷ್ಟ್ರು ಬಿಡಬಿಡೋ ನೀನು ಮಹಾ ಸತ್ಯ ಹರಿಶ್ಚಂದ್ರ ಎಂದು ಬೈದಿದ್ದರು. ಕಾಫಿಗೆ ಹೋಗಿದ್ದೆ ಸಾರ್ ಅದಕ್ಕೆ ಲೇಟ್ ಆಯಿತು ಎಂದು ಹೇಳಿ ಅವನು ಹೊಡೆತ ತಿಂದದ್ದು ಉಂಟು. ಆಟಕ್ಕೆ ಹೋಗಿಬಿಟ್ಟೆ ಸಾರ್ ಲೆಖ್ಖ ಮಾಡಲಿಲ್ಲ ಎಂದು ನಿಜವನ್ನು ಹೇಳಿ ಬೆಂಚಿನ ಮೇಲೆ ನಿಂತುದುಂಟು. ಹೀಗೆ ಬಾಲ್ಯದಿಂದಲೂ ತನಗೆ ಬಿದ್ದ ಸತ್ಯದ "ಪೆಟ್ಟು"ಗಳಿಂದ ಹರಿಶ್ಚಂದ್ರನ ಮೈ ಬರಡು ಕಟ್ಟಿತ್ತು. ಬುದ್ಧಿ ಚುರುಕಾಗಿತ್ತು. ಆದ್ದರಿಂದಲೇ ಇಂದವನು ಆ ನಿರ್ಧಾರಕ್ಕೆ ಬಂದುದು.

ಮುಂದೆ ಹರಿಶ್ಚಂದ್ರ ಹುಡುಗನಾಗಿದ್ದವನು ಮದುವೆಯಾದ, ಮನೆ ಮಾಡಿದ. ಯುದ್ಧ ಈ ಕಡೆ ಬಲವಾಗುತ್ತ ಬಂದಂತೆಲ್ಲ ಸಾಮಾನು ಸರಂಜಾಮೆಗಳ ಅಭಾವ ಹೆಚ್ಚಾಗುತ್ತ ಬಂತು. ಇದ್ದಕ್ಕಿದ್ದಂತೆ ಆರು ಕಾಸಿದ್ದ ಪನಾಮಾ ಬ್ಲೇಡು ಆರು ಆಣೆಗೆ ಏರಿತು. ಬೆಣ್ಣೆ ಹೋಗಿ ಅಟ್ಟಕ್ಕೆ ಕುಳಿತಿತು. ಅಕ್ಕಿ ಅದೃಶ್ಯವಾಯಿತು. ಬೇಳೆಗೆ ಗೋಳಾಯಿತು. ಆಗ ಜನ ಹಿಂದು ಮುಂದು ಕಾಣದೆ ಪದಾರ್ಥ ಸಂಗ್ರಹ, ಕಾಳಸಂತೆಯ

ವ್ಯಾಪಾರ, ಸುಲಿಗೆ, ಮೋಸ, ದರೋಡೆಗಳಿಗೆ ಪ್ರಾರಂಭಿಸಿದರು—ಅಕ್ಕಿ ತುಪ್ಪ ಎಲ್ಲ ಇತ್ತು. ಆದರೆ ಬಡವರ ಕೈಗೆ ಮಾತ್ರ ಯಾವುದೂ ನಿಲುಕು ತ್ತಿರಲಿಲ್ಲ. ಇಂಥಾ ಸ್ಥಿತಿಯಲ್ಲಿ ಜನ ಬಳಲುತ್ತಿರುವಾಗ ಘನ ಸರ್ಕಾರ ದವರು ಇದನ್ನು ಅರಿತು ಪರಿಶೀಲಿಸಿ, ತೀರ್ಮಾನಿಸಿ ರೇಷನಿಂಗ್ ವ್ಯವಸ್ಥೆ ಯನ್ನು ಜಾರಿಗೆ ತರುವುದಕ್ಕೋಸ್ಕರ ಸೆನ್‌ಸಸ್ ತೆಗೆದುಕೊಂಡರು.

ಈ ಸೆನ್‌ಸಸ್ ಘೋರಣೆ ಬಹಳ ವಿಜೃಂಭಣೆಯಿಂದ ನಡೆಯಿತು. ಯಾರೂ ಸುಳ್ಳು ಲೆಖ್ಖವನ್ನು ಕೊಡಬಾರದು ಎಂದು ಸರ್ಕಾರದ ಆಜ್ಞೆ ಯಾಗಿತ್ತಾದರೂ ಬಹಳ ಮಂದಿ ನಾಲ್ಕಿದ್ದವರು ಎಂಟು, ಎಂಟಿದ್ದವರು ಹನ್ನೆರಡು ಲೆಖ್ಖ ತೋರಿಸಿದರು. ಬೆಂಗಳೂರಿನ ಜನ ಸಂಖ್ಯೆ ಒಂದಿದ್ದುದು ಎರಡಾಯಿತು.

ಆಗ ಹರಿಶ್ಚಂದ್ರ ತನ್ನದೇ ಆದ ಒಂದು ನೀತಿಯನ್ನನುಸರಿಸಿ ತಾನು ಮತ್ತು ತನ್ನ ಹೆಂಡತಿ ಇಬ್ಬರ ಹೆಸರನ್ನೇ ಕೊಟ್ಟು ಸತ್ಯ ಪರಾಯಣ ನಾದ. ಎಲ್ಲರಂತವನು ಸುಳ್ಳು ನುಡಿಯಲು ಸಮರ್ಥನಾಗಲಿಲ್ಲ. ಅಕ್ಕಿ ಸಾಲದಿದ್ದಲ್ಲಿ ಆತ ಉಪವಾಸ ಇರುತ್ತಿದ್ದನೇ ಹೊರತು ಕಾಳ ಸಂತೆಯಲ್ಲಿ ಹೆಚ್ಚು ಬೆಲೆ ಕೊಟ್ಟು ಅಕ್ಕಿಯನ್ನು ತರುತ್ತಿರಲಿಲ್ಲ. ಅಕ್ಕಿ ಒಂದೇ ಅಲ್ಲ ಯಾವ ಪದಾರ್ಥವನ್ನೂ ಆತ ಕಾಳಸಂತೆಯಲ್ಲಿ ತರುತ್ತಿರಲಿಲ್ಲ.

ಬ್ಲೇಡು ಕಂಟ್ರೋಲ್ ದರಕ್ಕೆ ಸಿಗದೆ ಹರಿಶ್ಚಂದ್ರ ಗಡ್ಡ ಬಿಟ್ಟ. ಬೇಳೆ ಸಿಗದೆ ಸಾರು ಬಿಟ್ಟ. ಬಟ್ಟೆ ಸಿಗದೆ ಅರ್ಧ ಅಂಗಿ ತೊಟ್ಟ. ಅಂತೂ ಕಷ್ಟ ಪಟ್ಟನೇ ಹೊರತು ದಾರಿಗೆಡಲಿಲ್ಲ—

ಹರಿಶ್ಚಂದ್ರನ ಹೆಂಡತಿ ಚಂದ್ರಮತಿ ಗಂಡನಿಗೆ ತಕ್ಕ ಗುಣವಂತೆ. ಮೊದಮೊದಲು ಅವನು ಹೇಳಿದ್ದಕ್ಕೆಲ್ಲ ಹೂ ಎಂದಳು. ಅವನ ಸತ್ಯಕ್ಕೆ ತಾನೂ ಒಂದು ಹೆಗಲು ಕೊಟ್ಟಳು. ಅದರಿಂದಾದ ಫಲಾಫಲಗಳನ್ನು ತಾನೂ ಹೊತ್ತು ಅನುಭವಿಸಿದಳು. ಆದರೂ ಹೆಣ್ಣು ಹೆಂಗಸು. ಅಕ್ಕಿ ಕೋಟ ಕಡಿಮೆಯಾಗಿ, ಸಿಗುತ್ತಿದ್ದ ಎರಹು ಊಟವೂ ಸಿಗದಂತಾದಾಗ ಅವಳ ಹೃದಯ ಕೂಡ ಸ್ವಲ್ಪ ಚಲಿತವಾಯಿತು. ಎಲ್ಲಾದರೂ ಹೇಗಾ ದರೂ ಅಕ್ಕಿ ತನ್ನಿ ಎಂದು ಗಂಡನನ್ನು ಪೀಡಿಸಿದಳು. ಆದರೆ ಆತ ಧರ್ಮದ ಮಾರ್ಗವನ್ನು ಬಿಟ್ಟು ನಡೆಯಲಾರದವ. ಪಕ್ಕದ ಮನೆ

ಯವರು ಸುಖವಾಗಿ ದಿನಕ್ಕೆ ಮೂರು ಹೊತ್ತು ಉಂಡು ತಿಂದು ತೇಗುತ್ತಿರುವಾಗ ತನಗೆಲ್ಲಿಯ ಉಪವಾಸ ಗಂಟು ಬಿದ್ದಿತಲ್ಲಾ ಎಂದು ಅವಳಿಗನಿಸಿತು. ಒಂದೆರಡು ಸಾರಿ ಬಿರುಸಾಗಿ ಗಂಡನಿಗೆ ಅಂದು ನೋಡಿದಳು. ಆದರೆ ಈ ಗೊಮ್ಮಟೇಶ್ವರ ಕರಗಲಿಲ್ಲ. ತಾನೂ ಅಭಾವದಿಂದ ನರಳಿ ತನ್ನ ಹೆಂಡತಿಯನ್ನೂ ನರಳಿಸಲು ಮೊದಲು ಮಾಡಿದ.

ನಿಷ್ಠುರವಾಗಿ ಕೇಳಿದ್ದಕ್ಕೆ ಅವನು ಹೆಂಡತಿಗೆ ಹೇಳಿದ. ನೋಡು ಕಷ್ಟ ನಮಗೆ ಒಬ್ಬರಿಗೇ ಅಲ್ಲ. ಎಲ್ಲರಿಗೂ ಬಂದಿದೆ. ಇದೆಲ್ಲಾ ಪರೀಕ್ಷೆಯ ಕಾಲ. ವಿಶ್ವಾಮಿತ್ರ ಮತ್ತು ನಕ್ಷತ್ರಕರು ಇಂದು ತಿಂದು ತೇಗಿ ಠೀವಿಯಿಂದ ಓಡಾಡುತ್ತಿರಬಹುದು. ಅವರದು ಜಯವಲ್ಲ. ಅವರ ಜಯ ಚಿರಕಾಲ ಇರಲಾರದು. ತನ್ನ ಧರ್ಮ ಮತ್ತು ಸತ್ಯದಿಂದ ಇಂದು ಸ್ವಲ್ಪ ಕಷ್ಟವಾದರೂ ಅಂತ್ಯದಲ್ಲಿ ತನಗೇ ಚಿರವಾದ ಜಯ ಲಭಿಸುತ್ತದೆ ಎಂದು.

ಆಮೇಲೆ ಕಚೇರಿಯ ವಿಷಯದಲ್ಲೂ ಅಷ್ಟೆ. ಹರಿಶ್ಚಂದ್ರನದು ಒಂದೇ ಮಂತ್ರ. ಆಕಸ್ಮಾತ್ ಇವನು ಸಿವಿಲ್ ಸಪ್ಲೈಸ್ ಆಫೀಸಿನಲ್ಲೇ ಸೇರಿಕೊಳ್ಳಬೇಕೆ! ಅಲ್ಲಿ ಸೇರಿದವರೆಲ್ಲ ಸ್ವಕಾರ್ಯ ಸ್ವಾಮಿಕಾರ್ಯ ಧುರಂಧರರಾಗಿ ಸರ್ಜ್ ಕೋಟಿನ ಜರ್ಬಿನಲ್ಲಿ ತಿರುಗುತ್ತಿದ್ದರೂ ಹರಿಶ್ಚಂದ್ರ ಮಾತ್ರ ಹರಕು ಬಟ್ಟೆಯಲ್ಲಿದ್ದ. ಅವನ ಕೈಗೆ ಗಡಿಯಾರ ಬರಲಿಲ್ಲ. ಅವನ ಕಣ್ಣಿಗೆ ಬಂಗಾರದ ನೀರಿನ ಕನ್ನಡಕ ಏರಲಿಲ್ಲ. ಅವನು ಬಿ.ಎಸ್.ಎ., ಸೈಕಲ್ ತೆಗೆಯಲಿಲ್ಲ. ಇವನು ಹೀಗಿರುವುದನ್ನು ನೋಡಿ ಅನೇಕರು ಇವನ ವಿಚಾರದಲ್ಲಿ ಆಶ್ಚರ್ಯ ಮತ್ತು ಅನುಮಾನಗಳನ್ನು ಒಮ್ಮೆಲೇ ಸೂಚಿಸಿದ್ದುಂಟು. ಅವನೇನಯ್ಯ ಒಳಗೊಳಗೆ ಗಂಟುಮಾಡಿಟ್ಟುಕೊಂಡಿರಬೇಕು ಎಂದು ಹರಿಶ್ಚಂದ್ರನ ಕಿವಿಗೆ ಬೀಳುವಂತೆ ಹೇಳಿದವರುಂಟು.

ಆದರೆ ಒಳಗುಟ್ಟು ಯಾರಿಗೂ ತಿಳಿಯದು, ಹೇಗೆ ಕಷ್ಟದ ಮೂಸೆಯಲ್ಲಿ ಸಿಕ್ಕಿ ಒಂದು ಜೀವ ಜರ್ಝರಿತವಾಗುತ್ತಿದೆ ಎಂದು.

ಯಾವುದಕ್ಕೆ ಯಾವುದು ಸಂಬಂಧ ಎಂದು ನಗೆಯಾಡುತ್ತಿದ್ದ ಜನ ಬಾಯಿಬಾಯಿ ಬಿಡುವ ಸನ್ನಿವೇಶ ಒದಗಲು ಉಪಕ್ರಮವಾಯಿತು.

ಯೂರೋಪಿನಲ್ಲಿ ಯುದ್ಧವಾದರೆ ನಮಗೇನು-ಇಂಡಿಯಾದಲ್ಲಿರುವ ನಮಗೆ, ಅದರಲ್ಲೂ ಮೈಸೂರಿನಲ್ಲಿರುವ ನಮಗೆ – ಎನ್ನುತ್ತಿದ್ದವರು ಕೂಡ ನೆಗೆದೆದ್ದರು. ಬೆಂಗಳೂರಿನಲ್ಲಿ ಇಲ್ಲದ ಜನ ಬಂದು ಸೇರಿದರು. ಅದರಿಂದ ಮನೆ ಸಿಗದಂತಾಯಿತು. ಮನೆ ಬಾಡಿಗೆ ಏರಿತು. ಸಾಮಾನು ಸರಂಜಾಮು ಕನ್ನಡಿಯ ಗಂಟಾಯಿತು. ಕಾಷ್ಠಕ್ಕೆ ಯಜ್ಞಮಾಡುವ ಹೊತ್ತು ಬಂತು.

ಇಷ್ಟಾದರೂ ಹರಿಶ್ಚಂದ್ರ ಎದೆಗೆಡಲಿಲ್ಲ. ಬಹುಶಃ ವಶಿಷ್ಠರ ಉಪದೇಶದ ಪ್ರಾಬಲ್ಯ ಅಷ್ಟರ ಮಟ್ಟಿನದು ಎಂದು ಕಾಣುತ್ತದೆ. ಆತ ಸತ್ಯಕ್ಕೆ ಗಂಟುಬಿದ್ದ. ಮನೆ ಬಾಡಿಗೆ ಜಾಸ್ತಿ ಕೊಡುವುದಿಲ್ಲವೆಂದು ಮಾಲೀಕರೊಂದಿಗೆ ಜಗಳವಾಡಿ ಮನೆಬಿಟ್ಟು ಹೆಂಡತಿಯೊಡನೆ ಹೊರಟ. ತಿಂಗಳಿಗೆ ಐದೂವರೆ ಸೇರು ಅಕ್ಕಿ ಕೊಟ್ಟು ಅದರಲ್ಲಿ ತಲಾ ಅರುವತ್ತು ಊಟ ಮಾಡಿ ಎಂದರೆ ಹಾಗೇ ಮಾಡಿದ.

ಹೆಂಡತಿ ಒಂದು ದಿನ ಬಹಳ ರೇಗಿ ಕೇಳಿಯೇ ಬಿಟ್ಟಳು. ಅಲ್ಲ ಏನ್ರಿ ಇದು ಅನ್ಯಾಯ. ಅಕ್ಕಿ ಇಲ್ಲ ಅಕ್ಕಿ ಇಲ್ಲ ಅಂತ ಜನ ಬೊಂಬಡಿ ಹೊಡೀತಾರೆ. ಅಪ್ರೈ ಪೇಟೇಲಿ ನೋಡಿ ಪುರಿ ಮತ್ತು ಅವಲಕ್ಕಿಯ ಅಂಗಡಿಗಳು ಹೆಚ್ಚುತ್ತಾ ಇವೆ ಹೋಟೆಲಲ್ಲಿ ದೋಸೆ ಇಡ್ಲಿ ನಡೀತಾನೇ ಇದೆ ನಿರಾಯಾಸವಾಗಿ. ಪುಳಿಯೋಗರೆ ಚಿತ್ರಾನ್ನಮಾಡಿ ಜನ ಮಾರುತ್ತಿರುತ್ತಾರೆ. ಅವರಿಗೆಲ್ಲ ಎಲ್ಲಿಂದ ಬಂತ್ರಿ? ನಿಮಗೆ ಮಾತ್ರ ಇಲ್ಲವೇನೋ ಅದು. ಮತ್ತೆ ಸೌದೆಗೆ ಅಭಾವ ಅಂತೀರಿ. ನೋಡಿ, ಎದರು ಹೋಟಲಿನವರು ರಾಶಿ ರಾಶಿಯಾಗಿ ಒಡೆದ ಸರ್ವೆ ಸೌದೆ ಸ್ಟಾಕ್ ಮಾಡಿಕೊಂಡಿದ್ದಾರೆ. ಅವರಿಗೆ ಪ್ರತಿ ತಿಂಗಳೂ ಎಲ್ಲಿಂದ ಬರುತ್ತದೆ ಹೇಳಿ! ಸಂಸಾರ ಮಾಡುವವರಿಗೆ ಸೊನ್ನೆ ಅಂತ ಸರ್ಕಾರ ಹೇಳಿದೆಯೇನು? ಎಂದು ಅವಳು ಝುಳ ಝುಳ ಹೇಳಿಬಿಟ್ಟಳು.

ಇದೆಲ್ಲ ಹರಿಶ್ಚಂದ್ರನಿಗೆ ಗೊತ್ತಿಲ್ಲದೆ ಇರಲಿಲ್ಲ. ಎಲ್ಲ ಅವನಿಗೆ ತಿಳಿದಿತ್ತು. ಸರ್ಕಾರ ಮತ್ತು ಜನ ಇವರ ಮಧ್ಯದಲ್ಲಿ ನೂರಾರು ವಿಧದ ಮೋಸ ಮತ್ತು ಅನ್ಯಾಯಗಳು ನಡೆಯುತ್ತಿರುವುದನ್ನು ಅವನು ದಿನವಹಿ ಕಾಣುತ್ತಿದ್ದ. ಅದನ್ನು ತಡೆಗಟ್ಟಿ ವಿಶ್ವವನ್ನು ಸಮತೂಕಕ್ಕೆ ತರಲು ಬ್ರಹ್ಮನಿಗೂ ಅಸಾಧ್ಯ ಎನ್ನುವುದು ಅವನಿಗೆ ತಿಳಿದಿತ್ತು.

ಅವನು ಒಂದೇ ಒಂದು ದಿನ ಮನಸ್ಸುಮಾಡಿ ದಾರಿಯನ್ನೂ ಗುರಿಯನ್ನೂ ಬದಲಾಯಿಸಿಕೊಂಡಿದ್ದಲ್ಲಿ ಎಲ್ಲ ಸರಿಹೋಗಬಹುದಾಗಿತ್ತು. ಆದರವನು ಸತ್ಯಕ್ಕೆ ಮಾರು ಹೋದ ಹರಿಶ್ಚಂದ್ರ.

ಇಂದು ಅವನು ಜೀರ್ಣ ಶರೀರಿ. ಅರ್ಧ ವಸನಧಾರಿ. ನಿಡು ಸರದ ಬಡವ. ಸತ್ಯದ ಪರೀಕ್ಷೆ ಅವನ ದೃಷ್ಟಿಯಲ್ಲಿ ಕೊನೆಯ ಹಂತಕ್ಕೆ ಬಂದಿದೆ.

ಇನ್ನಾದರೂ ಈಶ್ವರ ದರ್ಶನವಾಗಬೇಡವೆ? ಇಲ್ಲದಿದ್ದಲ್ಲಿ ಹರಿಶ್ಚಂದ್ರನಿಗೆ ಸೋಲಾಗುವುದು ಖಂಡಿತ. ಅವನೇನಾದರೂ ಸೋತಲ್ಲಿ ಅಭಿನವ ರಾಘವಾಂಕನಾದ ನಾನು ಚರಿತ್ರೆಯನ್ನು ಬೇರೊಂದು ರೀತಿಯಾಗಿ ಬರೆಯಬೇಕಾದೀತು!

———: o :———

# ಮಾತುಗಳು

*C. N. Vasanth*

ಮಾತುಗಳು ಎಂಬ ವಿಚಾರವನ್ನು ಕುರಿತು ಕೆಲವು ಮಾತುಗಳನ್ನು ಬರೆಯಬೇಕೆಂದು ಪ್ರಯತ್ನಿಸುತ್ತಿರುವಾಗ ನಾನು ಪ್ರಪ್ರಥಮದಲ್ಲಿ ಮಾತುಗಳು ಎನ್ನುವುದರ ಮೂಲಾರ್ಥ ಏನೂ ಎನ್ನುವುದನ್ನು ಕುರಿತು ಎರಡು ಮಾತು ಹೇಳುವುದು ಅಪ್ರಾಸಂಗಿಕವಾಗಲಾರದು. ಆದರೆ ನಾನು ಹಾಗೆ ಮಾಡುವುದಿಲ್ಲ. ಮಾಡಬಯಸುವುದಿಲ್ಲ. ಮಾತಿಗೆ ನಾನು ಹುರುಳಾಗಿಲ್ಲ. ಅಲ್ಲದೆ ಮೂಲಾರ್ಥ ಅನುಕೂಲಾರ್ಥಗಳ ಚರ್ಚೆ ನನಗೆ ಮತ್ತು ನಿಮ್ಮೆಲ್ಲರಿಗೆ ಅಷ್ಟಾಗಿ ಅವಶ್ಯಕವಿಲ್ಲವೆಂದು ತಿಳಿಯುತ್ತೇನೆ. ಈಗಿದು ಒಮ್ಮೆಲೆ ಮಾತಿ ಎರಡು ವಿಧ ಎಂದು ಮುಂದುವರಿದು ಬಿಡುತ್ತೇನೆ.

ಸಾಮಾನ್ಯ ಮತ್ತು ಪಾರಿಭಾಷಿಕ ಎಂಬುವೇ ಆ ಎರಡು ವಿಧಗಳು. ಸಾಮಾನ್ಯ ಎಂದರೆ ನಿತ್ಯ ಜೀವನದ ನೂರಾರು ಪದಗಳು. ಪಾರಿಭಾಷಿಕ ಎಂದರೆ ಒಂದು ಶಾಸ್ತ್ರಕ್ಕೆ ಅಥವಾ ಒಂದು ಉದ್ಯಮಕ್ಕೆ ಸಂಬಂಧಿಸಿದಂತೆ ವಿಶೇಷ ಅರ್ಥವನ್ನು ಪಡೆದವುಗಳು. ಆಯಾ ಶಾಸ್ತ್ರದಲ್ಲಿ ಪಾರಂಗತರಾದವರಿಗೆ ಅಥವಾ ಆಯಾ ಉದ್ಯಮದಲ್ಲಿ ನುರಿತವರಿಗೆ ಮಾತ್ರ ಅಂಥಾ ಪದಗಳ ಒಳ ಅರ್ಥ ಪರಿಪೂರ್ಣವಾಗಿ ತಿಳಿಯುತ್ತದೆ. ಮಸಲಾ—

ಒಂದು ಉದ್ಯೋಗವನ್ನು ಉದಾಹರಣೆಗಾಗಿ ತೆಗೆದುಕೊಳ್ಳೋಣ: ಅಷ್ಟು ದೂರ ಏಕೆ ಹೋಗಬೇಕು! ನಮ್ಮ ಕಾರಕೂನಗಿರಿಯನ್ನೇ ತೆಗೆದುಕೊಳ್ಳೋಣ. ಅಂದರೆ ಕ್ಲಾರ್ಕ್‌ಷಿಪ್, ಕ್ವಿಲ್ ಡ್ರೈವಿಂಗ್, ಗುಮಾಸ್ತಗಿರಿ ಎಂಬ ಹಲವು ನಾಮಗಳು ಏತಕ್ಕೆ ಉಂಟೋ ಅದು. ಅದನ್ನ ಒಂದು ಉದ್ಯೋಗ ಎಂದು ತಿಳಿಯುವ ಪಕ್ಷಕ್ಕೆ ಅದನ್ನೇ ಉದಾಹರಣೆಗಾಗಿ ಆರಿಸಿಕೊಂಡಲ್ಲಿ ತಪ್ಪೇನೂ ಇರಲಾರದು. ಗುಮಾಸ್ತಗಿರಿಯ ಬೃಹದ್

ವಿಸ್ತಾರದಲ್ಲಿ ನುರಿತರೆ ನಮಗೆ ನೂರಾರು ಶಾಸ್ತ್ರೀಯ ಪದಗಳ ಪರಿಚಯವಾಗುತ್ತದೆ.

ಆಫೀಸುಗಳಲ್ಲಿ ಸಾಮಾನ್ಯವಾಗಿ ಯಾವುದಾದರೂ ಕಷ್ಟವಾದ ರೆಕಾರ್ಡುಗಳ ಕಂತೆ ಬಂದರೆ ಅದನ್ನ ಬೇಗ ಹೊತ್ತುಹಾಕಬೇಕಪ್ಪ ಎನ್ನುತ್ತಾರೆ. ಹೊತ್ತು ಹಾಕುವುದು ಎಂದರೆ ರೆಕಾರ್ಡನ್ನು ಅಲ್ಲಿಷ್ಟು ಇಲ್ಲಿಷ್ಟು ನೋಡಿ ಇಲ್ಲದ ಎರಡು ತಪ್ಪು ಹುಡುಕಿ ಹಿಂದಕ್ಕೆ ಕಳುಹಿಸಿಬಿಡುವುದು. ಇಲ್ಲವೇ ಮೇಲಿನ ಆಫೀಸಿಗೋ ಕೆಳಗನ ಆಫೀಸಿಗೋ 'ಅಭಿಪ್ರಾಯಕ್ಕಾಗಿ' ಕಳುಹಿಸಿಬಿಡುವುದು. ಇದನ್ನ ಹೊತ್ತು ಹಾಕುವ ಕೆಲಸ ಎಂದು ಗುಮಾಸ್ತರು ವರ್ಣಿಸುತ್ತಾರೆ. ಬಹುಶಃ ಎರಡು ಗಳು ಕಟ್ಟಿ ಹೊರುವುದರ ಭಾವಾರ್ಥವಿಲ್ಲಿರಬೇಕು!

ಕೆಲವು ಆಫೀಸುಗಳಲ್ಲಿ ಕೆಲವು ಕಾಗದ ಪತ್ರಗಳು ನಿಂತು ಹೋಗುತ್ತವೆ, ಬಾವಿಯಲ್ಲಿ ಬಿದ್ದ ಪಾತ್ರೆಪಡಗಗಳು ತಳ ಊರಿ ಕುಳಿತುಬಿಡುವಂತೆ. ಆಗ ಅವನ್ನು ಪೆಂಡಿಂಗ್ ಎನ್ನುತ್ತಾರೆ. ಅಂದರೆ ಪೆಂಡೆ ಪೆಂಡೆಯಾಗಿ ಮೂಲೆ ಮೂಲೆಯಲ್ಲಿ ಬಿದ್ದಿರುವ ಕಾಗದಗಳ ರಾಶಿ ಎಂದರ್ಥವಿರಬಹುದು.

ಇಂಥಾ ಪೇಪರುಗಳನ್ನು ಬಾವಿಯ ಆಳದಿಂದ ಹೊರಡಿಸಲು ಒಂದು ಪಾತಾಳಗರಡಿಯನ್ನು ಸಹ ಕಂಡುಹಿಡಿಯಲಾಗಿದೆ. ಅದರ ಹೆಸರು ರಿಮೈನ್‌ಡರ್ ಅಥವಾ ನೆನಪೋಲೆ ಎಂದು. ಆಗಾಗ ನಮ್ಮ ಪೇಪರ್ ನಿಮ್ಮಲ್ಲಿದೆ ಬೇಗ ಕಳಿಸಿ ಎಂದು ರಿಮೈಂಡರ್ ಹಾಕುತ್ತಿರಬೇಕಂತೆ. ಹಾಕು ಎನ್ನುವ ಪದ ಕೇವಲ ಅಶಾಸ್ತ್ರೀಯ. ನಾನು ನೀವು ತಿಳಿಯದವರು ಉಪಯೋಗಿಸುವ ಮಾತದು. ರಿಮೈನ್‌ಡರ್ ಹಾಕಬಾರದು, ಅದನ್ನು ಬಿಡಬೇಕು. ಅದು ಬಾಣ ಇದ್ದಹಾಗೆ. ಅದನ್ನ ಇಲ್ಲಿಂದ ಮಂತ್ರಿಸಿ ಬಿಟ್ಟಾ ಅಂದರೆ ಕೆಲಸ ಸಿದ್ಧವಾದಂತೆಯೆ. ಆದರೆ ಇಂಥಾ ಬಾಣಗಳಿಗೂ ಗಮನ ಕೊಡದೆ ಪ್ರತಿಬಾಣ ಬಿಡುತ್ತ ಕಾಲ ತಳ್ಳುವ ಕೆಲಸವೂ ಆಫೀಸುಗಳಲ್ಲಿ ಉಂಟು ಅನ್ನಿ. ಅದು ಬೇರೆ ವಿಚಾರ.

ಆಮೇಲೆ ಆಫೀಸಿನಲ್ಲಿ ಅಂದರೆ ಕೆಳಗಿನ ಸಣ್ಣ ಪುಟ್ಟ ಆಫೀಸಿನಲ್ಲಿ ಕೆಲವು ಪಾರಿಭಾಷಿಕ ಶಬ್ದಗಳನ್ನು ತಮ್ಮ ಯೋಗ್ಯತೆಗೆ ತಕ್ಕಂತೆ ಅಳವಡಿಸಿಕೊಂಡಿರುವ ಜನರುಂಟು. ಅಬ್‌ಸ್ಟ್ರ್ಯಾಕ್ಟ್ ಮತ್ತು ಎಕ್ಸ್‌ಟ್ರ್ಯಾಕ್ಟ್ ಎಂಬ ಪದಗಳನ್ನು ಅಬಷ್ಟ್ರಾಕಟ್ಟು ಮತ್ತು ಎಕಷ್ಟ್ರಾಕಟ್ಟು

ಎಂದು ಹೇಳುತ್ತಿದ್ದ ಒಬ್ಬ ಮುಚ್ಚಿ ಕೇಳಿದಾಗ ಕಟ್ಟು ಕಟ್ಟನ್ನೇ ತಂದು ಮುಂದಿಡುತ್ತಿದ್ದ. ಅಂದಹಾಗೆ ಈ ಮುಚ್ಚಿ ಅನ್ನುವ ಪದ ಕೂಡ ಬಹಳ ಸ್ವಾರಸ್ಯವಾದುದು. ಹೆಸರು ಹೇಗೆ ಬಂತು? ನನ್ನ ಅನುಮಾನ ಏನು ಎಂದರೆ ಸ್ಟೇಷನರಿ ಸಾಮಾನುಗಳನ್ನು ಮುಚ್ಚಿಡುತ್ತಾನಾದ್ದರಿಂದ ಅವನಿಗೆ ಆ ಹೆಸರು ಬಂದಿರಬಹುದು. ಮುಚ್ಚಿಗೆ ಇಂಥದೇ ಕೆಲಸ ಎಂದು ಯಾವ ಆಫೀಸಿನಲ್ಲಿಯೂ ನಿರ್ಧಾರಮಾಡಿದಂತೆ ತೋರುವುದಿಲ್ಲ. ಆತ ಆಳಿಗೆ ಆಳಲ್ಲ, ಆಳಿಗಿಂತ ಮೇಲೆ. ಇತ್ತ ಗುಮಾಸ್ತನಿಗೆ ಗುಮಾಸ್ತನಲ್ಲ, ಅವನಿಗಿಂತ ಕೆಳಗೆ. ಕಾಗದ ಪತ್ರಗಳನ್ನು ಆಯಾ ಆಫೀಸಿಗೆ ಒಯ್ದು ಕೊಟ್ಟು ಬಾ ಎಂದರೆ ಆಳಿಗೆ ಹೇಳಿಸಾರ್ ಎನ್ನುತ್ತಾನೆ. ಹೋಗಲಪ್ಪಾ ಪಿನ್ನು ಪೇಪರ್ ಮಸಿ ಎಲ್ಲ ಕೊಡು ಎಂದರೆ ಏನೂ ಇಲ್ಲ ಅಂತಾನೆ. ಇರುವ ಮಸೀಗೆ ನೀರು ಹುಯ್ಯುವುದು, ಪಿನ್ನಿಗೆ ಬದಲು ಪೇಸ್ಟ್ ಕೊಡು ವುದು, ಸಾಹೇಬರಿಗೆ ಕಾಫಿ ತರುವುದಕ್ಕಾಗಿ ಎಂದು ಒಂದೂವರೆಗೆ ಹೋಗಿ ನಾಲ್ಕು ಗಂಟೆಗೆ ಹಿಂತಿರುಗುವುದು, ಆಮೇಲೆ ನಮಗಿಂತ ಮುಂಚೆ ಮನೆಗೆ ಹೊರಟುಬಿಡುವುದು. ಇದು ಮುಚ್ಚಿಯ ಕೆಲಸ.

ಇಷ್ಟಲ್ಲದೆ ಈ ಮುಚ್ಚಿ ಸ್ವಲ್ಪ ಮೆಹನತ್ತುಮಾಡಿ ಗುಮಾಸ್ತರ ಸಂಗಡ ಸೇರಿ 'ಶಾಖಾಯ ಲವಣಾಯ'ಕ್ಕೆ ದಾರಿ ಮಾಡಿಕೊಳ್ಳುವುದೂ ಉಂಟು. ನೋಡಿ ಒಂದು ಸಂಸ್ಕೃತ ಪದ ಬಂದರೆ ಹಾರುತ್ತೀರಿ. ಇಂಗ್ಲಿಷ್ ಪದ ಬಂದರೆ ಮೂಗಿನಲ್ಲಿ ಬೆರಳಿಡುತ್ತೀರಿ. ಹೇಗಾದರೆ ಹೀಗೆ? ಶಾಖಾಯ ಲವಣಾಯ ಎಂದರೆ ಏನೋ ಅಲ್ಪ ಸ್ವಲ್ಪ. ಪಂಥೀರು ಆಗುವಲ್ಲಿ ಅಡಿಸೇರು. ಒಂದಿಷ್ಟು, ಎಂದೆರಡು ಕಾಸು ಅಂದ್ರೆ! ಲಂ........ಚ! ಮೂವತ್ತು ರೂಪಾಯಿ ಬರುವ ಕ್ಲಾರ್ಕು ಶಾಖಾಯ ಲವಣಾಯ ಅಂತ ಮೂವತ್ತು ಮಾಡಬೇಕು. ಇಲ್ಲದಿದ್ದರೆ ಸುಖವಿಲ್ಲ. ಇದನ್ನ ಬೇರೊಂದು ಶಾಸ್ತ್ರದವರು ಮಾಮೂಲು ಎಂದೂ ಕರೆಯುವುದು ವಾಡಿಕೆ. ಎಂದರೆ ಪತ್ರ ರಿಜಿಸ್ಟರಾಗುವಾಗ ನೀವು ಕೊಡುವ ಹಣದ ಮೇಲೆ ಇಡುವ ಗಿಣ. ರೊಕ್ಕದ ಮೇಲಿಡುವ ಗಿಕ್ಕ. ದುಡ್ಡಿನ ಜೊತೆಗೆ ಕೊಡುವ ಗಿಡ್ಡು. ಅದೇ ಮಾಮೂಲು. ಅದನ್ನ ವರ್ಣಿಸಿ ಹೇಳುವುದು ಅಸಾಧ್ಯ ಅಂದ್ರೆ. ಅದನ್ನ

ಕೊಟ್ಟು ನೋಡಿ ಇಲ್ಲ ಬಿಟ್ಟು ನೋಡಿ, ನಿಮಗೆ ಅರ್ಥವಾಗುತ್ತೆ ಮಾಮೂಲು ಅಂದರೇನು ಎಂಬುದು.

ಮಾಮೂಲು ಅನ್ನುವುದು ಗುಮಾಸ್ತರ ಜನ್ಮ ಸಿದ್ಧ ಹಕ್ಕು. ಅದನ್ನು ಮೀರಿ ನಡೆದವರಿಲ್ಲ. ಆದರೆ ಇಷ್ಟು ಬಿಗಿಯಲ್ಲದ ಇನ್ನೊಂದು ಪದ ಪ್ಯೂನ್‌ಗಳಲ್ಲಿ ವಾಡಿಕೆಯಾಗಿರುತ್ತದೆ. ಅದೇ 'ನಮಸ್ಕಾರ'. ನೀವು ಹೋಗುತ್ತಿದ್ದರೆ ನಿಮ್ಮ ಎದುರಿಗೆ ಕೂತಿದ್ದ ಪ್ಯೂನ್ ನಮ್ರನಾಗಿ ಎದ್ದು ನಿಂತು ನಮಸ್ಕಾರ ಸ್ವಾಮಿ ಎನ್ನುತ್ತಾನೆ. ನಿಮ್ಮ ಮನಸ್ಸಿನಲ್ಲಿ ನೀವು ಸೆಕ್ರೆಟರಿನೋ ಮಿನಿಸ್ಟರೋ ಆದಂತೆ ಭಾವಿಸುತ್ತೀರಿ. ಮತ್ತು ಅವನಿಗೆ ಪ್ರತಿ ನಮಸ್ಕಾರ ಸಹ ಮಾಡದೆ ಹೆಜ್ಜೆ ಹಾಕುತ್ತೀರಿ. ಆಗ ಪ್ಯೂನ್ ಮತ್ತೆ ಬುದ್ಧಿ ನಮಸ್ಕಾರ ಅನ್ನುತ್ತಾನೆ. ಆಗ ನೀವು ಜಂಟಲ್ ಮನ್ ಅಂತೆ ಹಿಂತಿರುಗಿ ಕೈ ಜೋಡಿಸಿ ನಮಸ್ಕಾರಮಾಡಿ ಮುಂದೆ ಹೋದರೆ ನಿಮ್ಮನ್ನವನು ಕೇವಲ ಹೊಸಬರೆಂದು ಪರಿಗಣಿಸುತ್ತಾನೆ. ಮತ್ತೆ ಮೂರನೆಯ ದಿನ "ಬುದ್ಧಿ ಮರೆತುಬಿಟ್ರಾ" ಅಂತ ಅವನು ಅಂದಾಗ [illegible] "ಇಲ್ಲಪ್ಪ ನಿನ್ನ ಹೇಗೆ ಮರೀಲಿ. ನೀನು ಕಾಟಪ್ಪ. ಕಾಟಯ್ಯ ಅಂತ ನಿನ್ನ ಹೆಸರು. ಕಾಟ ಅಂತ ನಿನ್ನ ನಾವು ದಿನಕ್ಕೆ ನೂರು ಸಾರಿ ಕೂಗಿ ನಿರಾಶರಾಗುತ್ತಿರಲಿಲ್ಲವೆ" ಎಂದು ಮುಂದೆ ಹೊರಟರೆ ಪ್ಯೂನ್ ನಿರಾಶನಾಗಿಬಿಡುತ್ತಾನೆ. ಏಕೆಂದರೆ ನಿಮಗೆ ನಮಸ್ಕಾರದ ಮರ್ಮ ಪೂರ್ಣವಾಗಿ ಅರ್ಥವಾಗಿಲ್ಲವೆಂದು ಅವನಿಗೆ ನಿರ್ಧಾರವಾದಂತಾಗುತ್ತದೆ. ನಮಸ್ಕಾರವೆಂದರೆ ಎರಡು ಕೈ ಜೋಡಿಸುವುದು, ತಲೆ ತಗ್ಗಿಸುವುದು, ಹಲ್ಲು ಕಿರಿಯುವುದು ಅಲ್ಲ. ನಮಸ್ಕಾರವೆಂದರೆ ನಾಷ್ಟಕ್ಕೆ ಕಾಸು ಎಂದರ್ಥ. ನಿಮ್ಮ ಪೀಠದ ಹತ್ತಿರ ಪ್ಯೂನ್ ಬಂದು ನಮಸ್ಕಾರ ಎಂದಾಗ ನೀವು ತಲೆ ಎತ್ತದೆ ಜೋಬಿನಲ್ಲಿ ಕೈಹಾಕಿ ಒಂದಾಣೆಯನ್ನು ತೆಗೆದು ಇಟ್ಟರಾಯಿತು. ಇಲ್ಲವೆ ದುಡ್ಡು ಇರಲಿಲ್ಲ ಅನ್ನಿ. ಆಗ ನಾಳೆ ಗೀಳೆ ನೋಡೋಣ ಅನ್ನಿ ಆತ ಮಾತನಾಡದೇ ಹೊರಲುಹೋಗುತ್ತಾನೆ. ಇದು ಪ್ಯೂನ್ ಮಹಾಶಯನ ಡೈರಿಯಿಂದ ತೆಗೆದ ಪದ.

ಈ ಪ್ಯೂನ್ ಮಹಾಶಯರು ಬರೆಯುವ ರಜಾ ರಿಪೋರ್ಟುಗಳನ್ನು ನೋಡಿದರಂತೂ ಯಾರಾದರೂ ದಿಗ್ಭ್ರಾಂತರಾಗಿಬಿಡುತ್ತಾರೆ.

"ರೆವಿನ್ಯೂ ಬ್ರಿಚ್ ಷೂಪ್ರಡೆಟ್ ಮಹಾ ಜನಬಗೆ ತಮ್ಮ ಆಫೀಚಿನ ಪ್ರ್ಯಾಕಟಪನ ಬರೆದು ಕೊಡ ಅಜ್ರಿ ಮಹಾ ಶ್ವಾಮಿ........" ಎಂಬ ಈ ಕನ್ನಡಕ್ಕೆ ಕನ್ನಡಿಂಬೇ ಇಲ್ಲವಾಗಿದೆ. ಇಂಥಾ ಕಾಗದಗಳು ಬಂದಾಗ ನೀವು ಸುಮ್ಮನೆ ಗ್ರಾಂಟೆಡ್ ಎಂದು ಹಾಕಿಬಿಡುವುದೇ ಒಳಿತು.

ಇನ್ನು ಹಾಸ್ಯಕ್ಕಾಗಿ ನಿರ್ಮಿಸಿಕೊಂಡ ಪದಗಳಿಗಂತೂ ಗುಮಾಸ್ತರ ಭಾಷೆಯಲ್ಲಿ ವಿಫುಲವಾಗಿದೆ. ಜುರು ಅಂದರೆ ರುಜು. ಗುದ್ದಲಿ ಪೂಜೆ ಅಂದರೂ ಅದೇ. ಅವಸರದ ಹೋಬಳಿ ಎಂದರೆ ನ್ಯಾಯವಿಧಾಯಕ ಮತ್ತು ಪ್ರ. ಪ್ರ. ಸಭೆಗಳು. ಕೊಕ್ಕೆ ಎಂದರೆ ತಕರಾರು ನೋಡೋಣ ಹೋಗಿ ಅಂದರೆ ನೋಡೊಲ್ಲ ಹೋಗಿ ಎಂದು. ಹೀಗೆ ಹೆಸರಿಸುತ್ತಾ ಹೋದರೆ ಇದೇ ಒಂದು ಡಿಕ್ಷನರಿ ಆಗಬಹುದು ಎಂಬ ಶಂಕೆ ನನಗಿದೆ. ಆಫಿಷಿಯಲ್ ಲ್ಯಾಂಗ್ವೇಜಿನ ಮರ್ಮ ಸ್ವಲ್ಪ ತಿಳಿದಂತಾಗಲಿ ಎಂದು ಇದನ್ನು ಬರೆದೆನೇ ಹೊರತು ಮಾತು ಮಾತಿಗೂ ಅರ್ಥ ಬರೆಯಬೇಕೆಂದಲ್ಲ. ಅದು ನನ್ನ ಕೈಲಾಗದ ಮಾತು!



# ಪ್ರಶ್ನೆ—ಉತ್ತರ

ಮನುಷ್ಯ ಎಂದು ಪ್ರಶ್ನೆ ಕೇಳುವುದನ್ನು ಕಲಿತನೋ ಅಂದು ಅವನು ಜಾಣನಾದ, ವಿಜ್ಞಾನಿಯಾದ, ಜ್ಞಾನಿಯಾದ ಎಂದು ಕೆಲವರು ಹೇಳುತ್ತಾರೆ. ಅದು ನಿರಾಧಾರವಾದ ವಿಚಾರ. ಮನುಷ್ಯ ಎಂದು ಪ್ರಶ್ನೆ ಕೇಳಿದನೋ ಅಂದು ಅವನ ದಡ್ಡತನ ಹೊರಬಿತ್ತು ಎಂಬುದು ನಿಜವಾದ ವಿಷಯ. ಏಕೆಂದರೆ ಪ್ರಶ್ನೆ ಕೇಳುವವನಿಗೆ ಉತ್ತರ ಗೊತ್ತಿರುವುದಿಲ್ಲ. ಪ್ರಶ್ನೆ ಅಪೂರ್ಣತೆಯ ಕುರುಹು. ಉತ್ತರ ಪೂರ್ಣತೆಯ ಸೂಚಕ. ಪ್ರಶ್ನಾರ್ಥಕ ಚಿಹ್ನೆಯು ಉತ್ತರಬೋಧಕ ಚಿಹ್ನೆಯ ಅವಲಂಬನದಿಂದ ಪರಿಪುಷ್ಟವಾಗಬೇಕು. ಮನುಷ್ಯನಿಗೆ ಅನೇಕ ವಿಷಯಗಳು ತಿಳಿದಿರಬಹುದು. ಆದರೆ ಪ್ರಶ್ನೆ ಕೇಳುವ ಮಟ್ಟಿಗೆ ಅವನು ಅಜ್ಞಾನಿ. ಅವನು ಬಾಯಬಿಟ್ಟು ಏಕೆ ಏನು ಎಂದು ಕೇಳಿದ ದಿನ ಬಣ್ಣಗೇಡಾಯಿತು. ಅಂದಿನಿಂದ ಇಂದಿನವರೆಗೂ ಪ್ರಶ್ನೆಗಳನ್ನು ಕೇಳುತ್ತಲೇ ಬಂದಿದಾನೆ. ಹಳೆಯ ಪ್ರಶ್ನೆಗಳ ಜೊತೆಗೆ ಹೊಸ ಪ್ರಶ್ನೆಗಳನ್ನು ಕೇಳಿದ್ದಾನೆ. ತನ್ಮೂಲಕ ಇರುವುದೂ ತಿಳಿಯದು, ಇರಬೇಕಾದುದೂ ತಿಳಿಯದು ಎಂಬ ಪ್ರಮೇಯಕ್ಕೆ ದೃಷ್ಟಾಂತವಾಗಿದ್ದಾನೆ. ಇದನ್ನೆಲ್ಲ ಪರಿಶೀಲಿಸಿದರೆ ಚರಿತ್ರೆ ಪುನರಾವರ್ತಿತವಾಗುತ್ತದೆ ಎನ್ನುವುದಕ್ಕಿಂತ ಚರಿತ್ರೆಯಲ್ಲಿ ಮನುಷ್ಯಕೋಟಿಯ ದಡ್ಡತನ ಪುನರಾವರ್ತಿತವಾಗುತ್ತಿದೆ ಎಂದು ಹೇಳುವುದು ಹೆಚ್ಚು ಸಮಂಜಸವಾದೀತು.

ದೊಡ್ಡವರಿಗಿಂತ ಮಕ್ಕಳು ಹೆಚ್ಚು ಪ್ರಶ್ನೆ ಕೇಳುತ್ತಾರೆ. ಆದ್ದರಿಂದಲೇ ಅವು ದಡ್ಡ ಹುಡುಗರಾಗುತ್ತವೆ. ಏಕೆಂದರೆ ಅವು ಕೇಳುವ ಕೆಲವು ಪ್ರಶ್ನೆಗಳಿಗೆ ಎಂಥಾ ಜಾಣರಾದ ಹಿರಯರೂ ಉತ್ತರ ಕೊಡುವುದು

ಅಸಾಧ್ಯವಾಗುತ್ತದೆ. ಆಕಾಶ ಮೇಲೆ ಏಕೆ ಇದೆ? ಎಂದು ಮಗು ಪ್ರಾರಂಭಿಸಿದರೆ ತಂದೆಯಾದವನು ಏನು ಉತ್ತರ ಕೊಡಬೇಕು! ಆಕಾಶ ಅಂತ ಒಂದು ವಸ್ತು ಇಲ್ಲಪ್ಪ ಎಂದು ಹೇಳಿದರೆ "ನೋಡು ಅಲ್ಲಿ ಕಾಣ್ತಾ ಇದೆಯಲ್ಲ" ಅನ್ನುತ್ತೆ ಅದು. ಆಕಾಶ ಮೇಲೆ ಇದ್ದುದು ಕೆಳಕ್ಕೆ ಬಿದ್ದರೆ? ಮೇಲೆ ಏನು ಹಾಕಿ ಅಂಟಿಸಿದ್ದಾರೆ? ಇಂಥಾ ಪ್ರಶ್ನೆಗಳಿಗೆ ಏನುತ್ತರ!

"ಅಪ್ಪ ಏನುಮಾಡ್ತಾ ಇದೀಯ?"

"ಹಾಲು ಕರೀತಾ ಇದೀನಿ. ಕಾಣೊಲ್ವೆ"

"ಏಕೆ ಕರೀಸ್ತಾ ಇದೀಯ?"

"ಹಸು ಹಾಲು ಕೊಡುತ್ತೆ ಅದಕ್ಕೆ ಕರಿಸ್ತಾ ಇದೀನಿ. ಕಾಫಿಗೆ ಬೇಕಲ್ಲ!"

"ಹಸು ಏಕಪ್ಪ ಹಾಲು ಕೊಡುತ್ತೆ?"

"ಏಕೆ ಅಂದರೆ ಏನೋ! ಹುಲ್ಲು ತಿನ್ನುತ್ತೆ. ಮೆಲಕು ಹಾಕುತ್ತೆ ಅದಕ್ಕೆ"

"ಅಪ್ಪ ಹಸು ಏಕೆ ಮೆಲಕು ಹಾಕುತ್ತೆ?"

"ಅದಕ್ಕೆ ಬೇರೆ ಕೆಲಸ ಇಲ್ಲ ಅದಕ್ಕೇ ಮೆಲಕು ಹಾಕುತ್ತೆ"

"ಕೆಲಸ ಇಲ್ವ?"

"ಹು"

"ಬೆಳಗ್ಗೆ ಅದೆಲ್ಲಿಗೋ ಹೋಗಿರುತ್ತೆ, ಸಾಯಂಕಾಲ ಬರುತ್ತಲ್ಲ ಮನೇಗೆ. ಏನು ಕೆಲಸ ಮಾಡುತ್ತೆ ಹೇಳು"

"ಕತ್ತೆ ಕಾಯುತ್ತೆ"

"ಆಹ ಸುಳ್ಳು ಹೇಳ್ತಿ. ಕತ್ತೆ ಕಾಯೋಕೆ ಹಸೂಗೆ ಏನು ಕೈ ಇದೆಯಾ"

ಹೀಗೆ ಮಗು ಮೇಲೆ ಮೇಲೆ ಪ್ರಶ್ನೆಯ ಮಳೆಗರೆಯ ತೊಡಗುತ್ತದೆ. ಇಂಥಾ ಪ್ರಶ್ನೆಗಳಿಗೆ ಅಪ್ಪನಿಂದ ಉತ್ತರಕ್ಕೆ ಪ್ರತಿಯಾಗಿ ಏಟು ಸಿಗುವುದೇ ಹೆಚ್ಚು. ಇಲ್ಲವೇ ಥು ದಡ್ಡ ಎಂಬ ಬೈಗಳವಂತೂ ಖಂಡಿತ ಸಿಗುತ್ತದೆ.

ಈ ಪ್ರಶ್ನೆ ಕೇಳುವ ದಡ್ಡತನ ಹೋಗಬೇಕಾದರೆ ಮಕ್ಕಳನ್ನು ಶಾಲೆಗೆ ಕಳುಹಿಸಬೇಕು. ಅಲ್ಲಿ ಅವರು ಪ್ರಶ್ನೆ ಕೇಳುವುದನ್ನು ಬಿಟ್ಟು ಉತ್ತರ

ಹೇಳುವುದನ್ನು ಕಲಿಯುತ್ತಾರೆ. ಕೇಳುವ ಪ್ರಶ್ನೆಗೆ ಎದುರುತ್ತರ ಕೊಡುವ ಅಭ್ಯಾಸ ಶಾಲೆಯಲ್ಲಿ ಆಗಬೇಕಾದುದೇ. ಪ್ರಶ್ನೆ ಕೇಳುವವರು ಉಪಾಧ್ಯಾಯರು. ಕೇಳಿಯೂ ಅವರು ಜಾಣರಾಗುತ್ತಾರೆ. ಉತ್ತರ ಹೇಳಲು ತಡವರಿಸುವ ಹುಡುಗ ದಡ್ಡನಾಗುತ್ತಾನೆ. ಉಪಾಧ್ಯಾಯರಿಗೆ ಉತ್ತರ ಗೊತ್ತಿರುತ್ತದೆ. ಕೈಲಿ ಪುಸ್ತಕ ಹಿಡಿದುಕೊಂಡಿರುತ್ತಾರೆ. ಅದರಲ್ಲಿ ಎಲ್ಲ ಬರೆದಿರುತ್ತದೆ. ಆದರೂ ಹುಡುಗರನ್ನು ಕಷ್ಟ ಪಡಿಸುವುದಕ್ಕೋಸ್ಕರ ಪ್ರಶ್ನೆ ಕೇಳುತ್ತಾರೆ. ಮತ್ತು ಹುಡುಗರಿಂದ ಉತ್ತರ ಕೊಡಲಾಗದಂಥಾ ಯಕ್ಷ– ಪ್ರಶ್ನೆಗಳನ್ನು ಕೇಳಬೇಕೆಂಬುದು ಅವರ ಗುರಿ. ಹುಡುಗ ಎಷ್ಟು ತಿಳಿದಿದ್ದಾನೆ ಎಂದು ಪರೀಕ್ಷೆ ಮಾಡುವುದಕ್ಕಿಂತ ಏನೇನು ಅವನಿಗೆ ಗೊತ್ತಿಲ್ಲ ಎನ್ನುವುದರ ಕಡೆಯೇ ಉಪಾಧ್ಯಾಯರ ಸೂಕ್ಷ್ಮ ದೃಷ್ಟಿ ಇರುತ್ತದೆ. ಅನೇಕರು ಪರೀಕ್ಷೆಯಲ್ಲಿ ತೇರ್ಗಡೆಯಾಗದಿರಲು ಇದೇ ಒಂದು ಕಾರಣ. ಫೇಲಾಗುವವರ ಸಂಖ್ಯೆ ಹೆಚ್ಚಿದಷ್ಟು ಉಪಾಧ್ಯಾಯರಿಗೆ ಸಂತೋಷ ಇಮ್ಮಡಿಯಾಗುತ್ತದೆ.

ಕಾಳಿದಾಸ ಮಹಾಕವಿಯ ಶಾಕುಂತಳ ನಾಟಕವು ದುರದೃಷ್ಟ ವಶಾತ್ ಕಾಲೇಜು ತರಗತಿಯೊಂದಕ್ಕೆ ಪಠ್ಯ ಪುಸ್ತಕವಾಗಿತ್ತು. ಕವಿಯೇನೋ ಅದು ಪಠ್ಯ ಪುಸ್ತಕವಾಗಲಿ ಎಂದು ಸುಮಾರು ನೂರಿಪ್ಪತ್ತು ಪುಟಗಳಷ್ಟಕ್ಕೇ ಬರೆದು ಮುಗಿಸದಿದ್ದರೂ, ಕವಿ ಶಿಷ್ಯರು ಅದಕ್ಕೆ ಆ ಗೌರವವನ್ನು ಒದಗಿಸುವ ಸಾಹಸ ಮಾಡಿದ್ದರು. ಪರೀಕ್ಷೆಯಲ್ಲಿ ಶಾಕುಂತಲದ ಮೇಲೆ ಒಂದು ಪ್ರಶ್ನೆ ಬರಬೇಕಿತ್ತು. ನಿಜಕ್ಕೂ ಬಂದದ್ದು ಒಂದೇ ಪ್ರಶ್ನೆಯೆ! ಅದು ಕಾಳಿದಾಸನ ನಾಟಕಕ್ಕೆ ಸಂಬಂಧಿಸಿದ್ದು ಎಂದು ತಿಳಿಯಬೇಕಾದರೆ ನಮಗೇ ಮೂರು ಗಂಟೆಗಳ ಕಾಲ ಬೇಕಾಯಿತು! ನಾವೆಲ್ಲ ಶಕುಂತಲೆ ಕಣ್ವ ಮತ್ತು ದುಷ್ಯಂತ ಮೊದಲಾದವರ ಪಾತ್ರ ಪರಿಶೀಲನ, ದೂರ್ವಾಸರ ಶಾಪ ವಿಚಾರ, ಕವಿಯ ವರ್ಣನಾ ಚಾತುರ್ಯ, ನಾಲ್ಕನೆಯ ಅಂಕದ ಸ್ವಾರಸ್ಯ ಇಂಥಾ ಮುಖ್ಯವಾದ ಎಲ್ಲ ಅಂಶಗಳನ್ನು ತಿಳಿದು ಸಜ್ಜಾಗಿ ಹೋಗಿದ್ದೆವು. ಆದರೆ ಅಲ್ಲಿ "ಬೇಟೆಯ ಪ್ರಯೋಜನವೇನು?" ಎಂಬ ಪ್ರಶ್ನೆ ಅವತರಿಸಿತ್ತು. ಕಾಳಿದಾಸ ಅದೇನು ಪುಣ್ಯ ಮಾಡಿದ್ದನೊ! ಅವನಿಗೆ ಕೂಡ ತಾನು ಬೇಟೆಯ ಮೇಲೆ ಬರೆದ ಪದ್ಯ

ಆ ದಿನವೇ ಮರೆತುಹೋಗಿರಬೇಕು. ಆದರದು ನಮ್ಮ ಉಪಾಧ್ಯಾಯರಿಗೆ ನೆನಪಿತ್ತು. ಅಂಥಾ ಪ್ರಶ್ನೆಗೆ ಏನು ಉತ್ತರ ಬರೆಯಬೇಕು, ಎಷ್ಟು ಪುಟ ಬರೆಯಬೇಕು ಎಂಬುದೇ ತಿಳಿಯದಾಯಿತು.

ಬೇಟೆಯಿಂದ ಪ್ರಯೋಜನವೇನು? ಕಾಡು ಮೃಗಗಳು ಸಾಯುತ್ತವೆ ಮತ್ತು ಸಾಧು ಪ್ರಾಣಿಗಳು ಬದುಕುತ್ತವೆ ಎಂದು ಬರೆದರೆ ಸಾಕೆ? ಕವಿ ಬೇಟೆಯ ವರ್ಣನೆಯನ್ನು ಏಕೆ ಮಾಡಿದ? ರಾಘವಾಂಕ ಹರಿಶ್ಚಂದ್ರ ಮಹಾರಾಜ ಎಂಟು ತರದ ಬೇಟೆಯಾಡಿದನೆಂದು ವರ್ಣಿಸಿದ್ದಾನೆ. ರಾಜರು ಹಿಂದಿನ ಕಾವ್ಯಗಳಲ್ಲಿ ಬೇಟೆಯಾಡಿದ್ದಾರೆ. ರಾಜರುಗಳು ಬೇಟೆ ಯಾಡಿದ ಉದ್ದೇಶ ದುಷ್ಟ ಶಿಕ್ಷಣ ಶಿಷ್ಟ ಪರಿಪಾಲನವಾದರೂ ಅದರ ಪರಿಣಾಮ ಪ್ರಣಯದಲ್ಲಿ ಕೊನೆಗಂಡಿರುವುದು ಆಶ್ಚರ್ಯದ ಸಂಗತಿ. ಹರಿಶ್ಚಂದ್ರನಿಗೆ ಹೊಲತಿಯರ ಕಾಟವಾದುದು, ದುಷ್ಯಂತನಿಗೆ ಶಕುಂತಳೆಯ ದರ್ಶನವಾದುದು ಇದಕ್ಕೆ ನಿದರ್ಶನ. ಅಂತೂ ಏನೋ ಈ ರೀತಿ ಒಂದು ಉತ್ತರವನ್ನು ಬರೆದುದಾಯಿತು ಅನ್ನಿ.

ಉಪಾಧ್ಯಾಯರ ಪ್ರಶ್ನೆಗಿಂತ ಹುಡುಗರ ಉತ್ತರ ಕೆಲ ಸಾರಿ ಬಹಳ ವಿಚಿತ್ರವಾಗಿರುತ್ತದೆ. ಎಲ್ಲ ಉಪಾಧ್ಯಾಯರೂ ಎಲ್ಲ ಹುಡುಗರಿಗೂ ಅಶೋಕ ಯಾರು? ಎಂಬ ಪ್ರಶ್ನೆಯನ್ನು ಹಾಕಿದ್ದಾರೆ. ಎಲ್ಲ ಕ್ಲಾಸುಗ ಳಲ್ಲಿಯೂ ಅದು ಬರುತ್ತದೆ. ಕಾರಣ ಒಂದೇ ಚರಿತ್ರೆಯನ್ನು ಪ್ರೈಮರಿ, ಮಿಡ್ಲ್, ಹೈ ಮತ್ತು ಕಾಲೇಜುಗಳಲ್ಲಿ ಹೇಳಿಕೊಡುವುದೆ. ಸರ್ವಜ್ಞ ಆದರಿಂದಲೇ ಉಪಾಧ್ಯಾಯರನ್ನು "ಹೇಳಿದ್ದೆ ಹೇಳುವರು ಕೇಳಿದ್ದೆ ಕೇಳುವರು" ಎಂದು ಬಣ್ಣಿಸಿದ್ದಾನೆ. ಆದರೆ ವಿದ್ಯಾರ್ಥಿಗಳು ಉತ್ತರ ವನ್ನು ಹೇಳುವಾತೆರ ಬೇರೆ! ಎ ಕ್ಲಾಸು ಹುಡುಗನನ್ನು ಅಶೋಕ ಯಾರು ಎಂದು ಕೇಳಿದರೆ 'ಅವನು ಒಬ್ಬ ರಾಜಾ ಸಾರ್' ಎಂದು ಮಾತ್ರ ಉತ್ತರ ಕೊಡುತ್ತಾನೆ. ಅವನ ಉತ್ತರಕ್ಕೆ ಉಪಾಧ್ಯಾಯರು ಹತ್ತಕ್ಕೆ ಹತ್ತು ನಂಬರ್ ಕೊಡದೆ ವಿಧಿ ಇಲ್ಲ.

ಆದರೆ ಐದು ರೂಪಾಯಿ ಮತ್ತು ಹನ್ನೆರಡು ರೂಪಾಯಿನ ಪರೀಕ್ಷೆಗೆ ಕಟ್ಟಿದ ಹುಡುಗರು ಅಶೋಕನ ವಿಚಾರವಾಗಿ ಪುಸ್ತಕದಲ್ಲಿ ಇರುವದನ್ನೆಲ್ಲ ಇರುವಂತೆಯೇ ಬರೆದು ಬಿಡುತ್ತಾರೆ—ಅವನು ಶಾಸನ ಹಾಕಿಸಿದ್ದು,

ಸಾಲು ಮರ ನೆಡಿಸಿದ್ದು, ಕಳಿಂಗ ರಾಜ್ಯದ ಮೇಲೆ ಯುದ್ಧ ಮಾಡಿದ್ದು ಇತ್ಯಾದಿಯಾಗಿ, ಪುಸ್ತಕದಲ್ಲಿ ಇರುವ ಹಾಗೆಯೆ ಬರೆದಿರುವುದರಿಂದ ಫೇಲ್ ಆಗುವಂತಿಲ್ಲ. ಏಕೆಂದರೆ ಅದರಿಂದ ಪುಸ್ತಕ ಬರೆದವರಿಗೆ ಅವಮಾನ. ಆದ್ದರಿಂದಲೇ ಆ ಎರಡು ಪರೀಕ್ಷೆಗಳಲ್ಲಿ ಬಹಳ ಹುಡುಗರು ತೇರ್ಗಡೆಯಾಗಿ ಬಿಡುತ್ತಾರೆ.

ಇನ್ನು ಕಾಲೇಜು ವಿದ್ಯಾರ್ಥಿ ಅಶೋಕ ಯಾರು? ಎಂಬ ಪ್ರಶ್ನೆಗೆ ವಿಚಿತ್ರವಾದ, ತನ್ನದೇ ಆದ ಒಂದು ಉತ್ತರವನ್ನು ಬರೆಯುತ್ತಾನೆ. ಅವನು ಪುಸ್ತಕ ಓದಿರುವುದಿಲ್ಲ. ಓದಲು ಬಿಡುವೂ ಇರುವುದಿಲ್ಲ. ಹಿಂದೆ ಕಲಿತದ್ದು ಮರೆತುಹೋಗಿರುತ್ತೆ. ದೇವದಾಸಿ ನಾಟಕ, ವಾರೆಸ್ ಸಿನಿಮಾ, ಪಂಕಜ್ ಸಂಗೀತ ಕಚೇರಿ ಇವುಗಳು ನೆನಪಿನಲ್ಲಿದ್ದಷ್ಟು ಅವನಿಗೆ ಪರೀಕ್ಷೆಯ ವಿಚಾರ ಇರುವುದಿಲ್ಲ. ಆದ್ದರಿಂದ ಅವನು ಅಶೋಕನ ಹೆಸರು ಹೇಳಿಬಿಟ್ಟು ಬುರುಡೆ ಹೊಡೆಯಲು ಪ್ರಾರಂಭ ಮಾಡುತ್ತಾನೆ. ಅಶೋಕ ಯುದ್ಧ ಮಾಡಿದ ಎಂದು ಹೇಳಿ ಯುದ್ಧದ ದುಷ್ಪರಿಣಾಮವನ್ನು ಕುರಿತು ಎರಡು ಪುಟ ತೀಡುತ್ತಾನೆ. ಅಶೋಕ ಧರ್ಮಾತ್ಮ ಎಂದು ಹೇಳಿ ಧರ್ಮಾತ್ಮರಾದ ಇತರ ರಾಜರು, ಧರ್ಮದ ವಿವರಣೆ, ಅಧರ್ಮದಿಂದ ಆಳಿದ ಚಾರಲ್ಸ್ ದೊರೆಯ ಅವಸ್ಥೆ ಅದನ್ನೆಲ್ಲಾ ವಿವರಿಸುತ್ತಾನೆ. ಅಶೋಕ ಸಾಲುಮರಗಳನ್ನು ನೆಡಿಸಿದ ಎಂದು ಹೇಳಿ—ಅದೊಂದನ್ನ ಮಾತ್ರ ಅವನು ಈ ಇಪ್ಪತ್ತುನಾಲ್ಕು ವರ್ಷಗಳೂ ಮರೆಯದೆ ನೆನಪಿಟ್ಟಿದ್ದಾನೆ— ಅವೆನ್ಯೂ ರೋಡಿನ ಬಿಸಿಲ ವೈಭವವನ್ನು ವರ್ಣಿಸಿ ಮಾದರಿ ಸರ್ಕಾರದ ಕಾರ್ಯದಕ್ಷತೆಯನ್ನು ಕುರಿತು ಟೀಕೆ ಮಾಡುತ್ತಾನೆ. ಧರ್ಮಾಭಿಮಾನ ಮತ್ತು ಧರ್ಮ ಸಮನ್ವಯದ ಮಾತೆತ್ತಿ ಇಂದಿನ ಕೋಮುವಾರು ಭಾವನೆಯನ್ನು ತೆಗಳುತ್ತಾನೆ. ಇಷ್ಟೆಲ್ಲಾ ಬರೆದು ತನ್ನ 'ಸರ್ವತೋಮುಖವಾದ' ಜ್ಞಾನವನ್ನು ಪ್ರದರ್ಶಿಸಿರುವ ವಿದ್ಯಾರ್ಥಿ ಎಂದಿಗಾದರೂ ಹಿಂದುಳಿದಾನೆ?

ಪ್ರಶ್ನೋತ್ತರದ ಹಾವಳಿ ಈಚೆಗೆ ಪತ್ರಿಕೆಗಳಲ್ಲಿ ಬಹಳ ಜೋರಾಗುತ್ತಿದೆ. ನಿಮ್ಮ ಪ್ರಶ್ನೆಗೆ ನಮ್ಮ ಉತ್ತರ; ನೀವು ಕೇಳಿದ್ದು, ನಾವು ಹೇಳಿದ್ದು; ಸಂಶಯ—ಸಮಾಧಾನ ಎಂಬ ಅನೇಕ ಶಿರೋನಾಮೆಗಳಲ್ಲಿ

ಅದು ಕಾಣುತ್ತಿದೆ. ಇಷ್ಟು ದಿನವೂ ಶೋಭಿಸಿದ ಕನ್ನಾಂಬ ಈಗ ಏನು ಮಾಡುತ್ತಿದ್ದಾಳೆ ಎಂದೊಬ್ಬನ ಪ್ರಶ್ನೆ. ಚಿಟ್ನೀಸಳ ಪತಿದೇವನ ಹೆಸರನ್ನು ತಿಳಿಯಲು ಒಬ್ಬನ ಆತುರ. ಉಮಾಶಶಿಯ ವಿಳಾಸ ಮೂರನೆಯವನಿಗೆ ಅವಶ್ಯಕ. ಪರಿಷತ್ತಿನವರು ಏನುಮಾಡುತ್ತಿದ್ದಾರೆ ಎಂದೊಬ್ಬರ ಸಂಶಯ. ಇಂಥಾ ಪ್ರಶ್ನೆಗಳಿಗೆ ಚಾಣ್ಮೆಯಿಂದ ಉತ್ತರ ಕೊಡುವ ಸಂಪಾದಕರು ಗಳಿದ್ದಲ್ಲಿ ಪ್ರಶ್ನೋತ್ತರುಗಳ ಕಳೆ ಇನ್ನೂ ಹೆಚ್ಚುತ್ತದೆ. ಇಲ್ಲದಿದ್ದಲ್ಲಿ ವ್ಯಕ್ತಿ ಮೂಲವಾದ ಟೀಕೆ ಟಿಪ್ಪಣೆಗಳಿಗೆ ಮೊದಲಾಗುತ್ತದೆ. ಪ್ರಶ್ನೋತ್ತರಗಳ ಚೆಂಡಾಟದಲ್ಲಿ ಯಾರ ಪಕ್ಕೆಲುಬು ಕೂಡ ಮುರಿಯಬಾರದು. ಆಟಕ್ಕಾಗಿ ಚೆಂಡನ್ನು ಎಸೆಯುವುದನ್ನು ನಮ್ಮವರು ಕಲಿಯಬೇಕಾಗಿದೆ. ಕಲಿಯು ತ್ತಾರೆಯೆ ಎಂಬುದು ಬೇರೊಂದು ಪ್ರಶ್ನೆ!

ಒಬ್ಬ ಕವಿ ತನ್ನದೊಂದು ಗ್ರಂಥ ಅಚ್ಚಾಗುತ್ತಿದ್ದ ಕಾಲದಲ್ಲಿ ಪುಸ್ತ ಕದ ಎಷ್ಟು ಹಾಳೆಗಳು ಮುದ್ರಿತವಾಗಿವೆ ಎಂದು ತಿಳಿಯುವುದಕ್ಕೋಸ್ಕರ ? ಹೀಗೆಂದು ಇಷ್ಟನ್ನೇ ಬರೆದು ಮುದ್ರಣಾಲಯದ ಮಾಲಿಕರಿಗೆ ಕಳುಹಿಸಿದ ನಂತೆ. ಅದಕ್ಕವರು ಉತ್ತರವನ್ನು ಕೊಡುವಾಗ ! ಎಂದಿಷ್ಟೆ ಬರೆದು ತಮ್ಮ ಆಶ್ಚರ್ಯವನ್ನು ಸೂಚಿಸಿದರಂತೆ.

ಪ್ರಶ್ನೆಗೆ ತಕ್ಕ ಉತ್ತರ ಎಂದರೆ ಹೀಗಿರಬೇಕು!



# ನಗರ

ಆಫೀಸಿಗೆ ಹೋದ ತಕ್ಷಣ ಹಾಜರಿ ಹಾಕುತ್ತಿರುವಾಗಲೆ ನಮ್ಮ ಹೆಡ್‌ಕ್ಲಾರ್ಕ್ ನನ್ನ ಮುಂದೆ ಒಂದು ಕಾಗದ ಇಟ್ಟು ಸ್ವಲ್ಪ ನೋಡುವಂತೆ ಹೇಳಿದರು. ಸಾಮಾನ್ಯವಾಗಿ ನಾವು ಆಫೀಸಿಗೆ ನಿತ್ಯ ಲೇಟಾಗಿ ಹೋಗುತ್ತೇವೆ. ಅಂದರೆ ಹನ್ನೊಂದಕ್ಕೆ ಹೋಗಬೇಕಾದವರು ಇನ್ನೊಂದು ಗಂಟೆ ತಡೆದು ಹೋಗುತ್ತೇವೆ. ಹೇಳಿ ಮೂರು ದಿನ ಲೇಟು, ಹೇಳದೇ ಮೂರು ದಿನ, ಅಮಾವಾಸ್ಯೆಯಂತೂ ಮಾಮೂಲು. ಹೀಗೇಂತ ತಿಂಗಳಲ್ಲಿ ಬಹು ದಿನಗಳಲ್ಲಿ ಲೇಟ್ ಆಗಿ ಹೋಗುವುದೇ ನಮ್ಮ ಪದ್ಧತಿ. ಹನ್ನೆರಡರ ಸುಮಾರಿಗೆ ಆಫೀಸಿನಲ್ಲಿ ಕಾಲಿಟ್ಟು ಹಾಜರಿ ಹಾಕಿ ನಮ್ಮ ಸೀಟಿಗೆ ಹೋಗಿ ಪೇಟ ತೆಗೆದಿಟ್ಟು ಗಾಳಿ ಹಾಕಿಕೊಳ್ಳುತ್ತ ಕುಳಿತುಬಿಡುವುದು. ಬಿಸಿಲಲ್ಲಿ ಬೇಯದೇ ಇರುವ ಬಿಸಿಬಿಸಿ ಅನ್ನ ತಿಂದು ಬಂದು ಸುಸ್ತಾಗಿರುತ್ತೆ. ಹಾಗೆ ಕೊಂಚ ವಿಶ್ರಮಿಸಿಕೊಳ್ಳುವುದು. ಸುಮಾರು ಒಂದು ಗಂಟೆಯ ಹೊತ್ತಿಗೆ ತಲೆ ಕೊಡವಿಕೊಂಡು ಎಚ್ಚರಮಾಡಿಕೊಂಡು ಒಂದೆರಡು ಲೋಟ ನೀರು ಕುಡಿದು ಪೆನ್ನು ಪೇಪರನ್ನು ತೆಗೆದು ಮೇಜಿನ ಮೇಲಿಟ್ಟು ಒಂದು ರೌಂಡ್ ತಿರುಗಾಡಿಬರುವುದು ಅಂತೂ ದಿನಕ್ಕೆ ಒಟ್ಟು ಎರಡೂವರೆ ಅಥವಾ ಮೂರು ಗಂಟೆ ಕೆಲಸ ಮಾಡಿದರೆ ಹೆಚ್ಚು ಹೆಚ್ಚು. ಹೀಗೆ ಸುಗಮವಾಗಿ ನಿರಾಯಾಸವಾಗಿ ಒಡ್ಡರ ಬಂಡಿಯಂತೆ ಹೋಗುತ್ತಿದ್ದ ನಮ್ಮ ಆಫೀಸ್ ಕೆಲಸ ಇಂದೇಕೆ ದಾರಿ ತಪ್ಪಿತು ಎಂದು ನನಗೆ ತಿಳಿಯಲಿಲ್ಲ. ಆಫೀಸಿನಲ್ಲಿ ಇನ್ನೂ ಕಾಲಿಟ್ಟಿಲ್ಲ ಆಗಲೇ ಮುಂದೊಂದು ಪೇಪರ್ ಬಿತ್ತಲ್ಲಪ್ಪ ಎಂದುಕೊಂಡು ಅದನ್ನು ಓದಿ ನೋಡಿದೆ.

ಓದುತ್ತಿದ್ದಂತೆ ಅರ್ಥವಾಯಿತು. ಅಷ್ಟಲ್ಲದೆ ನಮ್ಮ ಹೆಡ್ ರೈಟರು

ಮುತುವರ್ಜಿ ವಹಿಸುತ್ತಾರೆಯೆ! ನಮ್ಮ ಸಾಹೇಬರಿಗೆ ವರ್ಗ. ನಾಳೆ ಛಾರ್ಜು ಕೊಡುತ್ತಾರೆ. ಅವರಿಗೆ ಮೇಜವಾನಿ ಆಗಬೇಕು. ಅದಕ್ಕೆ ನಾನು ಚಂದಾ ಕೊಡಬೇಕು. ಎಲ್ಲ ಕ್ಲಾರ್ಕುಗಳೂ ಒಂದೊಂದು ರೂಪಾಯಿ ಹಾಕಿಬಿಟ್ಟಿವೆ. ಎಲ್ಲಿತ್ತಪ್ಪ ಇವುಗಳ ಹತ್ತಿರ ಅಷ್ಟು ದುಡ್ಡು. ಮೊನ್ನೆ ತಾನೆ ಕಾಫಿಗೆ ಕಾಸಿಲ್ಲ ಅಂತಿದ್ದೋವೆಲ್ಲ ಇವತ್ತು ರೂಪಾಯಿನ ಪಟ್ಟಿ ಕೆಳಗೆ ಡಿಟೋ ಅಂದಿದಾರಲ್ಲ.

ನನ್ನ ಹತ್ರ ಏನೋ ಒಂದು ಬಿಡಿಕಾಸಿಲ್ಲ. ಇದೇ ಒಂದು ರೂಪಾಯಿ ಇದ್ದರೆ ಹದಿನಾರು ಲೋಟ ಕಾಫಿ ಕುಡಿಯಬಹುದು. ಇಲ್ಲ, ಕಡಲೆ ಉಸಳಿ ಬೇಕು ಅನಿಸಿದರೆ ಎಂಟು ದಿನ ಟಿಫಿನ್ ಮಾಡಬಹುದು. ಅದು ಹಾಗಿರಲಿ ಮನೇಲಿ ಹತ್ತು ಮಕ್ಕಳು ಓಡಿಬಂದು ಅಪ್ಪ ಕಡಲೆಕಾಯಿಗೆ ಮೂರು ಕಾಸು ಕೊಡು ಎಂದು ಪ್ರಾಣ ಹಿಂಡಿದಾಗ ಅವರನ್ನ ಬೈದು ಓಡಿಸಿದ್ದಾಯಿತು. ಈಗ ಇಲ್ಲಿ ನೋಡಪ್ಪ ಒಂದು ರೂಪಾಯಿ ಬಿಚ್ಚಬೇಕಂತೆ. ತಿಂಗಳಿಗೆ ನಾಲ್ಕು ಜನ ಸಾಹೇಬರಿಗೆ ವರ್ಗ, ಎರಡು ರಥೋತ್ಸವ, ಮೂರು ಹಾಸ್ಟಲುಗಳ ಪ್ರಾರಂಭ ಹೀಗಾದರೆ ನಾವು ಬದುಕಿದಂತೆಯೆ ಇದೆ. ನಾನೇನಾದರೂ ಕೊಡೊಲ್ಲ ಅಂದೆನೋ ನಮ್ಮ ಹೆಡ್ ಕ್ಲಾರ್ಕ್ ಸಾಹೇಬರಿಗೆ ಸಿಟ್ಟು ಬರುತ್ತದೆ. ಏನು ಮಹಾರಾಯ ಒಂದು ರೂಪಾಯಿ ಕೊಡೋಕೆ ಆಗೊಲ್ಲೇನ್ರಿ ಎನ್ನುತ್ತಾರೆ. ಈ ಕ್ಲಾರ್ಕುಗಳು ಕಾಗದ ಮುಂದೆ ಬಂದಾಗ ಮೂಕ ಕುರಿಗಳಂತೆ ರೂಪಾಯಿ ರೂಪಾಯಿ ಅಂತ ಬರೆದು ಬಿಡುತ್ತವೆ. ಆಮೇಲೆ ಹಿಂದುಗಡೆ ಬೈದುಕೊಳ್ಳುತ್ತವೆ. ಯಾವ ಪುರುಷಾರ್ಥಕ್ಕಾಗಿ ನಾವು ಚಂದಾ ಕೊಡಬೇಕು ಎಂದೇನಾದರೂ ನಾನು ಕೇಳಲಿ, ನಾನೊಬ್ಬನೇ ನಿಷ್ಠುರವಾಗಬೇಕಾಗುತ್ತದೆ. ಮನೆಗೆ ಒಂದು ಮಾವಿನ ಹಣ್ಣು ಒಯ್ಯುವುದಕ್ಕಾಗುವುದಿಲ್ಲ, ದೇವರಿಗೆ ಒಂದು ತೆಂಗಿನ ಕಾಯಿ ಒಡೆಸಲು ಹಿಂದು ಮುಂದು ನೋಡಬೇಕಾಗುತ್ತದೆ. ಅಷ್ಟೇಕೆ ನಾನು ಈರೀತಿ ವರ್ಷಕ್ಕೆ ಇಪ್ಪತ್ತನಾಲ್ಕು ರೂಪಾಯಿನ ಗಂಟನ್ನ ಖರ್ಚು ಮಾಡುವುದಿಲ್ಲಪ್ಪ. ನನಗೆ ಮನಸ್ಸಿಲ್ಲ. ನಾನು ಅದೇ ದುಡ್ಡಿನಲ್ಲಿ ತಿಂಡಿ ತಿಂದುಬಿಡುತ್ತೇನೆ. ಎಂದರೆ ನಾನು ಪಟಿಂಗರ ಗುಂಪಿನವನಾಗುತ್ತೇನೆ.

ನಮ್ಮ ಸಾಹೇಬರುಗಳು ದೊಡ್ಡ ಕೆಲಸದ ಮೇಲೆ ವರ್ಗವಾಗಿ

ಹೋಗುತ್ತಾರೆ. ಹೆಚ್ಚು ಸಂಬಳ ಸಿಗುತ್ತದೆ. ಇಷ್ಟು ದಿನಾನೂ ತಾಪೇದಾರಿ ಮಾಡಿದ ನಮಗೆ ಅವರೇ ನ್ಯಾಯವಾಗಿ ಕಾಫಿ ತಿಂಡಿ ಅಷ್ಟೇ ಅಲ್ಲ ಒಂದು ಊಟಾನೂ ಹಾಕಿಸಬೇಕು. ಸಂಬಳ ಹೆಚ್ಚಾಗಿ ಬರುವ ಮಹನೀಯರು ಖರ್ಚು ಮಾಡಲಿ!

ಇಷ್ಟಾಯಿತೂ ಹೇಳಿದ ಕಾಲಕ್ಕೆ ಸರಿಯಾಗಿ ಟೀಗೆ ಬಂದ ಆಫೀಸರುಗಳನ್ನ ನಾನು ನೋಡಿಯೇ ಇಲ್ಲ. ಬರೋದು ಅರ್ಧ ಗಂಟೆ ಲೇಟಾಗಿ. ಅಲ್ಲಿಯವರೆಗೂ ನಾವು ಹಸಿದು ಕೂತಿರಬೇಕು. ಬಂದವರೇ ಮಹಾ ದೊಡ್ಡದಾಗಿ ಹುಸಿನಗು ನಗುತ್ತ ತಮ್ಮ ಪೀಠದಲ್ಲಿ ಕುಳಿತು ಅಂತರಿಕ್ಷದ ಕಡೆ ನೋಡುತ್ತ ಎಡಗೈಯ ತುದಿ ಬೆರಳಿನ ಉಗುರನ್ನು ಹಲ್ಲಿನಲ್ಲಿ ಕಡಿಯುತ್ತ ಪಕ್ಕದ ಚಿಕ್ಕ ಆಫೀಸರೊಂದಿಗೆ ಚಕ್ಕಂದವಾಡುತ್ತಿರುವುದು. ನಮ್ಮ ಲಕ್ಷ್ಯವಂತೂ ಅವರಿಗೆ ಇರುವುದೇ ಇಲ್ಲ. ಅನಂತರ ತಿಂಡಿ ತಿನ್ನುವ ರೀತಿಯನ್ನು ಅದೇನಂತ ವರ್ಣಿಸಬೇಕು. ಎಡಗೈಲಿ ಎರಡು ಚಿಪ್ಸ್ ತಗೊಂಡು ತಿನ್ನೋದು. ವಡೇನ ಅನಾಮತ್ ಬಾಯಿಗೆ ಒಯ್ದು ಅರ್ಧ ತಿಂದು ಅರ್ಧ ಚೆಲ್ಲುವುದು. ಏನೋ ಮಹ ಮನೆಯಲ್ಲಿ ಆಗತಾನೆ ಮೂರು ಮಸಾಲೆ ದೋಸೆ ಹೊಡೆದು ಬಂದವರಂತೆ ತಟ್ಟೆಯಲ್ಲಿದ್ದುದನ್ನೆಲ್ಲಾ ಮುಟ್ಟಿ ಬಿಡುವುದು. ಏಕೆ, ಎದುರಿಗೆ ಇಟ್ಟ ತಿಂಡಿಯನ್ನು ಪೂರ್ತಿಯಾಗಿ ತಿನ್ನುವುದು ಅವಮಾನವೊ! ನಮಗಿಂತ ಉತ್ತಮವಾದ ತಿಂಡಿಯನ್ನೇ ತಮ್ಮ ಎದುರಿನಲ್ಲಿ ಇಟ್ಟಿರುತ್ತಾರಲ್ಲ. ನಮಗೆ ಚೂರು ಸಿಹಿ, ಒಂದು ಬೋಂಡಾ, ಇಷ್ಟು ಉಪ್ಪಿಟ್ಟು ಇಟ್ಟರಾಯಿತು. ನಿಮಗೆ ಸ್ಪೆಷಲ್ ತಟ್ಟೆಗಳು ಬಂದಿರುತ್ತವೆ. ಹಾಗೆಂದಾದರೂ ಪೂರ್ತಿ ತಿನ್ನಬಾರದೆ!

ಎಲ್ಲರೂ ಒಟ್ಟಾಗಿ ಜಮಖಾನದ ಮೇಲೆ ಹರಟೆ ಹೊಡೆಯುತ್ತ ಕುಳಿತು ಎಲ್ಲರೂ ಒಂದೇ ತಿಂಡಿಯನ್ನ ಸಮಾನಸ್ಕರಂತೆ ತಿನ್ನುವ ಕಾಲ ಬರಬಾರದೆ? ಅದೂ ನಮ್ಮ ಜನ ದಿನಾ ತಿನ್ನುವ ತಿಂಡಿಯಾಗಬೇಕು. ಇಡ್ಲಿ, ಕೇಸರಿಭಾತ್ ಇಲ್ಲವೆ ಮೊಸರನ್ನ ಹುಳಿಯನ್ನ ಪೊಂಗಲು, ಒಂದು ಲೋಟ ಸಕ್ಕರೆ ಪಾನಕ, ಸೀರುಮಜ್ಜಿಗೆ. ಇಂಥವೆಲ್ಲ ಗಂಟಲಲ್ಲಿ ಇಳಿಯುವುದಿಲ್ಲವೇನೋ?

ಹಿಂದಿನ ಕಾಲದಲ್ಲಿ ಮನೆ ಮನೆಯಲ್ಲಿ ವಾರ ವಾರ ಇಂಥಾ ಸಂಭ್ರಮ

ನಡೀತಾ ಇತ್ತು. ಅದಕ್ಕೆ ಕರೆಯದಿದ್ದರೂ ನಾನು ಹೋಗುತ್ತಿದ್ದೆ. ಕೇಳದಿದ್ದರೂ ಚಂದಾ ಕೊಡುತ್ತಿದ್ದೆ. ಇವರೂ ಹಾಗೆ ಮಾಡಲಿ. ಆಫೀಸಿನಲ್ಲಿ ಭೇದ, ಹೊರಗೆ ಭೇದ, ಒಳಗೆ ಭೇದ........

ಇನ್ನ ಟೀಪಾರ್ಟಿಗೆ ಅಂತ ನಾವಷ್ಟೊಂದು ಜನ ಬಂದಿರುತ್ತೀವಲ್ಲ, ನಮ್ಮಲ್ಲಿ ಎಷ್ಟು ಜನರ ಮುಖಪರಿಚಯ, ಹೆಸರು, ಡೆಸೆ ಸಾಹೇಬರಿಗೆ ತಿಳಿದಿರುತ್ತೆ ಅಂತೀರಿ? ಪೇಪರ್ ಮೇಲೆ ಬರೀತೇವೆ. ಪೇಪರ್ ಮೇಲೆ ಬೈಸಿಕೊಳ್ಳುತ್ತೀವೆ. ಅಷ್ಟೆ ನಮ್ಮ ಮತ್ತು ಸಾಹೇಬರುಗಳ ಸಂಬಂಧ—

ಈ ನಮ್ಮ ನಂಟುತನವನ್ನು ಬೆಳಸಿಕೊಳ್ಳುವುದಕ್ಕೋಸ್ಕರ ದೊಡ್ಡ ಟೀಪಾರ್ಟಿಗಳು. ನಿರ್ವಾಹವಿಲ್ಲ. ಕೊನೆಯಲ್ಲಿ ವರ್ಗವಾದ ನಿಮ್ಮ ಸಾಹೇಬರು ಆಡುವ ಮಾತನ್ನು ನೋಡಿ. "ನಿಮ್ಮಲ್ಲಿ ಬಹಳ ಮಂದಿಯ ಹೆಸರಾಗಲೀ ಪರಿಚಯವಾಗಲೀ ನನಗೆ ನೇರವಾಗಿಲ್ಲ. ಹಿಹಿಹಿ. ನಿಮ್ಮೆಲ್ಲರ ಸಹಾಯದಿಂದ ನಾನು ಇದುವರೆಗೂ ಕೆಲಸ ಮಾಡಲು ಅನುಕೂಲವಾಗಿತ್ತು. ಹಿಹಿಹಿ. ನೀವು ಇಂದು ನನ್ನನ್ನು ಸ್ವಾಗತಿಸಿದಂತೆ ನಾನೂ ನಿಮ್ಮನ್ನು ಸ್ವಾಗತಿಸಲು ಉತ್ಸುಕನಾಗಿದ್ದೇನೆ. ಆದರೆ ನನ್ನದೆಂಬ ಮನೆ ನನಗಿಲ್ಲ. ಈ ಕಚೇರಿ ಈಗ ನನ್ನದಲ್ಲ! ಹೀಗಾಗಿದೆ ನನ್ನ ಅವಸ್ಥೆ. ಏನೇ ಆಗಲಿ ನಿಮಗೆಲ್ಲ ದೇವರು ಒಳ್ಳೆಯದು ಮಾಡಲಿ"

ನೋಡಿದಿರಾ, ಪರಿಚಯಾನೇ ಇಲ್ಲದ ಆಫೀಸರ ಮೆಹರ್ಬಾನಿ ಸಂಪಾದಿಸಲು ಈ ಥೋರಣೆಯ ಖರ್ಚು. ನಮಗೂ ನಿಮ್ಮ ಪರಿಚಯ ಇಲ್ಲ ಸ್ವಾಮಿ ಅಂತ ನಾವೂ ಅನ್ನಬಹುದಲ್ಲ! ನಮ್ಮೆಲ್ಲರ ಸಹಾಯದಿಂದ ಇವರು ಗುಡ್ಡ ಕಡಿದರಂತೆ. ನಾವು ಇಲ್ಲದೇ ಇದ್ದಿದ್ರೆ ಸರಿಯಾಗಿ ಒಂದು ನೋಟು ಹಾಕುವವರು ದಿಕ್ಕಿರಲಿಲ್ಲ. ನಾವು ಮಾಡಿದ್ದಕ್ಕೆಲ್ಲ ಅಸ್ತು ಅಂದವರು ಇಂದು ಹೀಗೆ ಶೀವಿಯಿಂದ ತಮ್ಮ ಮೂಗೆ ಮೇಲೆ ಅನ್ನುತ್ತಾರೆ. ಇನ್ನ ನಮ್ಮನ್ನ ಸ್ವಾಗತಿಸಲು ತಮಗೆ ಇಲ್ಲಿ ಸ್ವಂತ ಮನೆ ಇಲ್ಲವಂತೆ. ಬೇಡ ಬಯಲಲ್ಲಿ ಸ್ವಾಗತಿಸಲಿ. ಹೋಟಲಿನಲ್ಲಿ ಆಗಲಿ ಪಾರ್ಟಿ. ಮುಖ್ಯ ಏನು ಹೇಳಿದರೇನು ಸುಖವಿಲ್ಲ. ವಿಷಯ ಅಷ್ಟೆ. ಕ್ಲಾರ್ಕುಗಳ ಕಷ್ಟ ಸಹಸ್ರವಿರುತ್ತವೆ. ಅದನ್ನ ಆಫೀಸರಾದವರು ಕಿಂಚಿತ್ತಾದರೂ ಅರ್ಥ ಮಾಡಿಕೊಳ್ಳಬೇಕು. ಚೆನ್ನಾಗಿ ಕೆಲಸ ತೆಗೆದು

ಕೊಳ್ಳಬೇಕು, ಅನುಕೂಲಗಳನ್ನೂ ಮಾಡಿಕೊಡಬೇಕು. ಸಾಹೇಬರುಗಳು ಈ ತಮ್ಮ ಮನೋವೃತ್ತಿಯಿಂದ ಒಂದು ಗೇಣು ಇಳಿಯಬೇಕು. ಅದರಂತೆ ಗುಮಾಸ್ತರುಗಳು ತಮ್ಮ ಮನೋವೃತ್ತಿಯಿಂದ ಒಂದು ಮಾರು ಏರಬೇಕು. ಆಗ ಎಲ್ಲ ಸರಿಹೋಗುತ್ತೆ. ಆಫೀಸರಿಗೆ ಆಗ ಸ್ವರ್ಗವಾದರೆ ಮನೆ ಮನೆಗೆ ಔತಣವಾಗುತ್ತದೆ. ಈ ಚಂದಾಪಟ್ಟಿ, ಇಷ್ಟು ಬಲವಂತ ಆಗ ಅನವಶ್ಯಕ.

ಅಂಥಾ ಕಾಲ ಬರುವವರೆಗೂ ನಾನು ಚಂದಾ ಹಣ ಕೊಡುವುದಿಲ್ಲ ಎಂದೆನೋ ಈ ಮಟಮಟ ಮಧ್ಯಾಹ್ನದಲ್ಲಿ ಕಛೇರಿಯಲ್ಲಿ ಮಾರಾಮಾರಿಯಾಗುತ್ತದೆ. ಎಂದುಕೊಂಡವನೆ ಒಂದುರೂಪಾಯಿ ಎಂದು ಬರೆದು ಮೌನದಿಂದ ಪೇಪರನ್ನು ಹೆಡ್‌ರೈಟರ ಮುಂದಿಟ್ಟು ನನ್ನ ಪೀಠಕ್ಕೆ ಹೋಗಿ ಪೇಟ ತೆಗೆದಿಟ್ಟು ಕಣ್ಣು ಮುಚ್ಚಿದೆ.



# ಬುದ್ಧ—ಯುದ್ಧ

ಶತ್ರುಗಳು ಬಂದು ಮೇಲೆ ಬಿದ್ದಾಗ ಏನು ಮಾಡಬೇಕು ?

ಶತ್ರುಗಳು ಸಜ್ಜಾಗಿ ಶಸ್ತ್ರ ಸಮೇತರಾಗಿ ಬರುತ್ತಾರೆ. ಆದ್ದರಿಂದ ನಾವೂ ಶಸ್ತ್ರ ಅಸ್ತ್ರಗಳಿಂದ ಪುಷ್ಟರಾಗಬೇಕು. ಶತ್ರುಗಳು ಆಕ್ರಮಿಸುತ್ತಾರೆ, ಮೇಲೆ ಬೀಳುತ್ತಾರೆ, ಯುದ್ಧ ಮಾಡುತ್ತಾರೆ. ಆದ್ದರಿಂದ ನಾವೂ ಅವರನ್ನು ಆಕ್ರಮಿಸಬೇಕು, ಮೇಲೆ ಬೀಳಬೇಕು, ಯುದ್ಧಮಾಡಬೇಕು ! ಶತ್ರುಗಳು ಅಸಂಖ್ಯಾತರಾಗಿದ್ದಾರೆ. ಅದಕ್ಕೇ ದೇಶದಲ್ಲಿನ ತರುಣರೆಲ್ಲ ಸೈನ್ಯಕ್ಕೆ ಸೇರಬೇಕು. ಶತ್ರುಗಳು ಹಣ ಶೇಖರಿಸಿಕೊಂಡಿದ್ದಾರೆ ಅಂತಲೇ ನಾವು ಯುದ್ಧಕ್ಕೆ ಸಹಾಯಮಾಡಿ, ಖರ್ಚನ್ನು ಕಡಿಮೆಮಾಡಿ, ಪ್ರಯಾಣ ವನ್ನು ಅವಶ್ಯವಿದ್ದಷ್ಟು ಮಾತ್ರಕ್ಕೆ ಅಳವಡಿಕೊಂಡು ದೇಶದ ಮೂಲಪ್ರಶ್ನೆಗೆ ಉತ್ತರ ಕೊಡಲು ಸಹಕಾರಿಗಳಾಗಬೇಕು. ಯಂತ್ರ ಸಾಮುಗ್ರಿಗಳು, ಕಾಗದ, ಮಸಿ, ದವಸಧಾನ್ಯಗಳು ಎಲ್ಲ ಯುದ್ಧಮಾಡುವ ದೇಶಸೇವಕರಿಗೆ ಬೇಕು. ಅದಕ್ಕಾಗಿ ನಾವು ತ್ಯಾಗಕ್ಕೆ ಸಿದ್ಧರಾಗಬೇಕು. ಒಂದೇ ಮಾತಿನಲ್ಲಿ ಹೇಳುವುದಾದರೆ ಶತ್ರುಗಳು ಬಂದು ಮೇಲೆ ಬಿದ್ದಾಗ ಏನು ಮಾಡಬೇಕು ಎಂದರೆ ಯುದ್ಧ ಮಾಡಬೇಕು.

ಕ್ಷಾಮ ಬಂದಾಗ ಏನು ಮಾಡಬೇಕು ?

ಕ್ಷಾಮ ಬಂದಾಗ ಮೀಟಿಂಗ್ ಮಾಡಬೇಕು !

ಮೀಟಿಂಗ್ ಮಾಡಬೇಕು. ಹಳ್ಳಿ ಹಳ್ಳಿಯವರೆಲ್ಲ ಸೇರಿ ಸಭೆ ನಡೆಸಬೇಕು. ದೇಶ ದೇಶವೇ ಕೇಂದ್ರದಲ್ಲಿ ಮೀಟ್ ಮಾಡಬೇಕು. ರಾಷ್ಟ್ರ ರಾಷ್ಟ್ರಗಳಿಂದ ಪ್ರತಿನಿಧಿಗಳನ್ನು ಕಳುಹಿಸಿ ವಿಶ್ವ ಸಮ್ಮೇಳನವನ್ನು

ಮಾಷಿಯೇತು. ಕ್ಷಾಮ ಎಂದರೆ ಸರ್ವ ಸಾಮಾನ್ಯವಲ್ಲ. ಇದೊಂದು ದೊಡ್ಡ ಕಂಟಕ. ಅದೊಂದು ಶನಿ ದೆಶೆ. ಅದೊಂದು ಗ್ರಹಚಾರ. ಅದು ಅಮರಿಕೊಳ್ಳುವುದು ಅಪರೂಪವಾದರೂ ಒಮ್ಮೆ ಅಮರಿದರೆ ಸಾಕು ಅದರ ಹಿಡಿತವೆಂಥ ತಪ್ಪಿಸಿಕೊಳ್ಳುವುದು ಕಷ್ಟ. ಕ್ಷಾಮ ಬಂದಿರುವುದು ಪ್ರಪಂಚದಲ್ಲಿ ಇದೇ ಮೊದಲಬಾರಿ ಅಲ್ಲ. ಯುದ್ಧದಂತೆ ಕ್ಷಾಮವೂ ಆಗಾಗ ಬಂದಿರುವ ಜ್ಞಾಪಕ ನಮಗಿದೆ. ಯಾವ ಯಾವಾಗ? ಯುದ್ಧ ಮತ್ತು ಕ್ಷಾಮ ಇವು ಒಟ್ಟಿಗೆ ಬರುತ್ತವೆಯೆ? ಬಂದಿವೆಯೆ? ಬಂದಿದ್ದರೆ ಎಷ್ಟು ಸಾರಿ? ಅದಕ್ಕೇನಾದರೂ ನಿಕಟವಾದ ಕಾರ್ಯ-ಕಾರಣ ಸಂಬಂಧ ಉಂಟೆ? ನೋಡಬೇಕು. ಪುಸ್ತಕಗಳನ್ನು ತಿರುವಿಹಾಕಿ, ಫೈಲು ಗಳನ್ನು ಸ್ಟಡಿ ಮಾಡಿ, ಹಾಕಿದ ಪ್ಲಾನುಗಳನ್ನು ಪರಿಶೀಲಿಸಿ, — ಇಷ್ಟೆಲ್ಲಾ ಆಗಬೇಕು.

ಆದಕ್ಕಾಗಿಯೇ ಮೀಟಿಂಗ್ ಆವಶ್ಯಕ ಎಂದದ್ದು.

ಎಲ್ಲಿ ಕ್ಷಾಮ, ಯಾವಯಾವ ಪ್ರದೇಶದಲ್ಲಿ ಯಾವಯಾವ ಕಾಳು ಕಡಿ ಕಡಿಮೆಯಾಗಿದೆ, ಯಾವ ಪ್ರದೇಶದಿಂದ ಅವನ್ನು ರಫ್ತು ಮಾಡಬೇಕು, ಇದಕ್ಕಾಗಿ ಯಾರನ್ನಾದರೂ ಡೆಪ್ಯುಟೇಷನ್ ಕಳುಹಿಸುವುದು ಉಚಿತವೆ ಮುಂತಾದ ನೂರಾರು ಪ್ರಶ್ನೆಗಳು – ಹುತ್ತವನ್ನು ಕೆದಕಿದಾಗ ಏಳುವ ಇರುವೆಗಳಂತೆ – ತಲೆದೋರುತ್ತವೆ.

ಅವುಗಳನ್ನು ಚರ್ಚಿಸಲು ಒಂದು ಮೀಟಿಂಗ್ ಅತ್ಯಾವಶ್ಯಕ.

ಇದಕ್ಕಿಂತ ಇನ್ನೊಂದು ಮುಖ್ಯವಾದ ಕೆಲಸವಿದೆ. ಜನಕ್ಕೆ ಉತ್ತರ ಹೇಳುವ ಕೆಲಸ. ಜನ ಹಸಿದಿದ್ದಾರೆ. ಜನ ಜನರನ್ನು ಮೋಸಮಾಡು ತ್ತಿದ್ದಾರೆ. ಇರುವ ದಾಸ್ತಾನ ಎಷ್ಟು, ಎಲ್ಲಿಂದ ಹೊಸ ಸರಕನ್ನು ತರಿಸಲು ಏರ್ಪಾಡು ಮಾಡಿದ್ದೀರಿ? ನೀವು ಇದನ್ನೆಲ್ಲಾ ನಿಮ್ಮದೇ ಆದ ಧ್ಯಾನಸ ದಿಂದ ಪರಿಶೀಲಿಸುತ್ತ ಕುಳಿತರೆ ಹೊಟ್ಟೆಗಿಲ್ಲದೆ ನಾವು ಸಾಯುವುದಿಲ್ಲವೆ? ನಿನ್ನೆ ಮೊನ್ನೆ ಅಂಗಡಿಗಳಲ್ಲಿ ಇಡಕಿ ತುಂಬಿದ್ದ ಬೆಲ್ಲ ಇವತ್ತು ಎಲ್ಲಿ ಮಂಗ ಮಾಯವಾಯಿತು? ದೇಶದ ಕೆಲವು ಪ್ರದೇಶಗಳಲ್ಲಿ ಜನ ಹೊಟ್ಟೆಗಿಲ್ಲದೆ ಪ್ರಾಣಬಿಟ್ಟವರು ನಿಮ್ಮ ಗಮನಕ್ಕೆ ಬಂದಿದಾರೆಯೆ? ಬಂದಿದ್ದರೆ ಅವರ ಸಂಖ್ಯೆ ಎಷ್ಟು? ನೀವು ಮಾಡುತ್ತಿರುವುದೇನು ಆಹಾರದ ಕಂಟ್ರೋಲೋ

ಅಥವಾ ಬ್ಲಾಕ್ ಮಾರ್ಕೆಟ್ ಕಂಟ್ರೋಲೋ? ಇಂಥಾ ತರಾತುರಿ ಪ್ರಶ್ನೆಗಳಿಗೆ ಉತ್ತರ ಹೇಳಬೇಕು.

ಮೀಟಿಂಗ್ ಇಲ್ಲದೆ ಗತ್ಯಂತರವಿಲ್ಲ.

ಜನ ಕೇಳುತ್ತಿದ್ದಾರೆ, ದೇಶದ ಕೆಲವು ಪ್ರದೇಶಗಳನ್ನು 'ಕ್ಷಾಮ ಪೀಡಿತ' ಎಂದು ಉದ್ಘೋಷಿಸಿ ಎಂದು. ಹಾಗೆ ಮಾಡಿದಲ್ಲಿ ಇನೂ ಹಾಹಾಕಾರ ಹೆಚ್ಚಾಗಿಬಿಡುತ್ತದೆ. ಮಾಡದಿದ್ದರೆ ಪ್ರಜಾಪ್ರವಾಹ ಆರ್ಭಟಿಸುತ್ತದೆ.

ಮೀಟ್ ಮಾಡಬೇಕೆ ಬೇಡವೇ ಎಂಬ ಪ್ರಶ್ನೆ ಕೇಳುತ್ತ ಕುಳಿತಿರಲು ನಿಮಿಷ ಮಾತ್ರವೂ ಆಗದು.

ಕ್ಷಾಮ ಜನಕ್ಕೆ ಮಾತ್ರವಲ್ಲ, ಪಶು ಪ್ರಾಣಿಗಳಿಗೆ ಬಂದಿದೆ.' ಘೂಳಿಮೈಯ ಮೂಕಪ್ರಾಣಿಗಳು ಒಣಗಿದ ಎರೆ ನೆಲವನ್ನು ನೆಕ್ಕುತ್ತಿವೆ. ದನಕ್ಕೆ ಹುಲ್ಲಿಲ್ಲ. ದನಕ್ಕೆ ನೀರಿಲ್ಲ. ದೇಶದ ಗೋಧನ ನಷ್ಟವಾಗಿ ಹೋಗುತ್ತಿದೆ.

ಕರೆಯಬೇಕು ಒಂದು ಸಮ್ಮೇಳನವನ್ನು.

ಹೋ ಎಂದು ಜನ ಸಮ್ಮೇಳನದ ಹೊರವಲಯದಲ್ಲಿ ನೆರೆದರು. ಗುಜುಗುಜು ಎನ್ನುತ್ತಿದ್ದ ಸಭೆ ಸುಮ್ಮನಾಯಿತು. ಅಧ್ಯಕ್ಷರು ಉದ್ದವಾದ ತಮ್ಮ ಭಾಷಣವನ್ನು ಓದಿ, ಕ್ಷಾಮ, ಕ್ಷಾಮಕ್ಕೆ ಕಾರಣವಾದ ಮಳೆಯ ಅಭಾವ ಮೊದಲಾದವನ್ನು ವಿವರಿಸಿದರು. ಹೊರದೇಶದಿಂದ, ಪರದೇಶದಿಂದ ಬೇಕಷ್ಟು ಸಾಕಷ್ಟು ಧಾನ್ಯ ಬರುವ ಸೂಚನೆ ಇದೆ ಎಂದು ಭರವಸೆ ಇತ್ತರು

ಸಭೆ ನಿಶ್ಶಬ್ದವಾಗಿತ್ತು. ಎಲ್ಲರೂ ನೆರೆದಿದ್ದರು. ಹಿರಿಯ ಅಧಿಕಾರಿಗಳು, ಜಮೀನುದಾರರು, ವರ್ತಕರು, ರೈತವೃಂದ, ಕೂಲಿಗಳು, ಕರಣಿಕರು, ಉಪಾಧ್ಯಾಯರು ಎಲ್ಲರೂ. ಅಧ್ಯಕ್ಷರು ತಮ್ಮ ಭಾಷಣವನ್ನು ಮುಗಿಸುತ್ತ ಈ ಕ್ಷಾಮಕಾಲದಲ್ಲಿ ಸಾರ್ವಜನಿಕ ಮಹಾಶಯರು ಉದಾರವಾಗಿ ದಾನಮಾಡಬೇಕು ಎಂದು ಬೇಡಿಕೊಂಡು ಪ್ರತಿಯೊಂದು ದರ್ಜೆಯ ಮುಖಂಡರನ್ನೂ ಅಲ್ಲಿಯೇ ಕೇಳಿಕೊಂಡರು.

ಜಮೀನುದಾರರು ಎದ್ದು ನಿಂತರು. ಅವರು ನಿಲ್ಲುವ ಠೀವಿ,

ಮುಖದ ವರ್ಚಸ್ಸು, ಹಾಕಿದ ಉಡಿಗೆ ತೊಡಿಗೆಗಳು ಇವುಗಳನ್ನು ನೋಡಿದ ಯಾವ ಪರಕೀಯನಾಗಲೀ ನಮ್ಮ ದೇಶದಲ್ಲಿ ಕ್ಷಾಮವಿಲ್ಲ ಎಂದು ಒಂದು ಹೇಳಿಕೆಯನ್ನು ಕೊಟ್ಟುಬಿಡುತ್ತಿದ್ದನೋ ಏನೋ. ಬೆಣ್ಣೆಯ ಗುಡಾಣದಲ್ಲಿ ಮುಳುಗಿ ಉಸಿರು ಸಿಕ್ಕು ನರುಳುವವರಂತೆ ಅವರು ಮಾತನಾಡಿದರು. ಮಳೆಯಾದಲ್ಲಿ ಬೆಳೆ. ಅದು ನಮ್ಮ ದೇಶದ ವ್ಯವಸಾಯ ವಿಜ್ಞಾನದ ಸೂತ್ರವಾಗಿಬಿಟ್ಟಿದೆ. ರೈತ ಮಳೆಯ ಸಂಗಡ ಜೂಜಾಡುತ್ತಾನೆ ಎಂದು ಅರ್ಥ ಶಾಸ್ತ್ರಜ್ಞರು ಹೇಳುತ್ತಾರೆ. ಅಂಥದರಲ್ಲಿ ಇಂದು ಮಳೆ ಇಲ್ಲದೆ ಕ್ಷಾಮ ಒದಗಿದೆ. ತಮ್ಮಿಂದ ಯಾವ ಸಹಾಯವೂ ಆಗದು ಎಂದವರು ಹೇಳಿದರು.

ವ್ಯಾಪಾರಗಾರರು ಎದ್ದು ನಿಂತರು. ತಾ ಎನ್ನುವುದು ತಮ್ಮ ತಾತನ ಕಾಲದ್ದು, ಕೋ ಎಂಬುದು ತಮ್ಮ ಕುಲದಲ್ಲೇ ಬಂದಿಲ್ಲ ಎಂಬ ಮಾತು ಎಷ್ಟು ಅಪದ್ಧವಾದುದು. ತಾವು ಯಾರು? ಕೇವಲ ವಾಹಕರು ಅಷ್ಟೆ. ಬ್ರಾಹ್ಮಣರು ಕೊಟ್ಟ ಹವಿಸ್ಸನ್ನು ದೇವತೆಗಳಿಗೆ ತಲುಪಿಸುವ ಅಗ್ನಿ ದೂತನಂತೆ ಅವರು ಒಂದು ಕಡೆ ರೈತ ಮತ್ತು ಕಂಪನಿಗಳಿಗೂ ಜನಕ್ಕೂ ಸಂಬಂಧವನ್ನೇರ್ಪಡಿಸುವ ನಂಟುಗಾರರು. ಎಡಗೈಯಿಂದ ಬಂದ ಮಾಲನ್ನು ಬಲಗೈಯಿಂದ ಕೊಟ್ಟುಬಿಡುವುದು ಅವರ ಕೆಲಸ. ಅದನ್ನು ಇಷ್ಟು ದಿನದಿಂದಲೂ ನಿಸ್ಪೃಹರಾಗಿ ನಡೆಸಿಕೊಂಡು ಬಂದಿದ್ದಾರೆ. ಸಿಕ್ಕ ಪುಡಿಗಾಸಿನ ಲಾಭವನ್ನು ಶಾಶ್ವತವೆಂದು ಮೋಸಹೋಗಿ ದಡ್ಡರಾಗಿದ್ದಾರೆ. ಆದರೆ ಇವತ್ತು? ಅವರೇನು ಮಾಡಬಲ್ಲರು? ರೈತ ಬೆಳೆದಿಲ್ಲ ಕಾಳುಗಳನ್ನು. ಕಂಪನಿಯವರು ತಯಾರಿಸಿಲ್ಲ ಸಾಮಾನುಗಳನ್ನು. ತಾವೇನು ಈಗ ಮಾಡಲಾದೀತು? ಮಾಲಿದ್ದರೆ ತಾನೆ ಅದನ್ನು ಜನಕ್ಕೆ ಹಂಚಿ ಪುಣ್ಯ ಕಟ್ಟಿಕೊಳ್ಳುವುದು? ಮಾಲು ಇಲ್ಲ. ಆದ್ದರಿಂದ ತಾವು ಏನೂ ಮಾಡಲಾರದವರಾಗಿದ್ದೇವೆ ಎಂದವರು ಬಿನ್ನವಿಸಿಕೊಂಡರು.

ಅಲ್ಲಿಗೆ ಒಂದು ಭಾಗದ ಜನ ತಮ್ಮ ಅಭಿಪ್ರಾಯವನ್ನು ಸೂಚಿಸಿದುದಾಯಿತು. ಇನ್ನು ಉಳಿದಿರುವವರು ಬಡವರ ಗುಂಪಿನವರು. ರೈತರು, ಕೂಲಿಗಳು, ಕರಣಿಕರು, ಉಪಾಧ್ಯಾಯರುಗಳು, ಇವರೆಲ್ಲರೂ ನಿಂತು

ಗಂಟೆ ಗಟ್ಟಲೆ ಮಾತನಾಡಲು ಕಾಲವಿಲ್ಲ. ಮಾತನಾಡುವುದಾದರೂ ಏನಿದೆ? ಅವರೆಲ್ಲರ ಪರವಾಗಿ ಒಬ್ಬರು ಮಾತನಾಡಿದರೆ ಸಾಕು.

ಕರಣಿಕನು ಎದ್ದು ನಿಂತನು. ನಿಂತು ಹೇಳಿದನು " ಸ್ವಾಮಿ ನಾನು ನನ್ನ ಕೈಲಾದ ಮಟ್ಟಿಗೂ ಕ್ಷಾಮವನ್ನು ನಿವಾರಿಸಲು ಸಹಾಯಮಾಡಲು ತಯಾರಿದ್ದೇನೆ. ಹಿಡಿ ಅಕ್ಕಿ ಕೊಡಿ. ಪುಡಿ ಕಾಸು ಕೊಡಿ. ನನಗದು ಸಾಕು. ಉಳಿದುದೆಲ್ಲ ಕ್ಷಾಮ ಪೀಡಿತರಿಗೆ ಆಗಲಿ " ಎಂದು.

ಬುದ್ಧ ಯುಗದ ಭಿಕ್ಷುಕಿಯು ತೋರಿದ ತ್ಯಾಗಕ್ಕೂ ಯುದ್ಧಯುಗದ ಕರಣಿಕನ ತ್ಯಾಗಕ್ಕು ಇರುವ ಸಾಮ್ಯ ವೈಷಮ್ಯಗಳನ್ನು ಚರ್ಚಿಸುತ್ತ ಸದಸ್ಯರೆಲ್ಲ ಮೀಟಿಂಗನ್ನು ಮುಕ್ತಾಯಗೊಳಿಸಿ ಮನೆಯತ್ತ ತೆರಳಿದರು!!



# ಸಾಹಿತ್ಯ ಸಮ್ಮೇಳನ

ರಾಮುಪುರದ ಸಾಹಿತ್ಯ ಸಮ್ಮೇಳನಕ್ಕೆ ನಾನೂ ಹೋಗಬೇಕಾಗಿ ಬಂತು. ಅದೂ ನಾಡಿನ ಪರವಾಗಿ, ನುಡಿಯ ಪರವಾಗಿ ಹೋಗಬೇಕಾಗಿ ಬಂದುದು ನನಗೊಂದು ಹೆಮ್ಮೆಯ ವಿಚಾರ. ಅಂಥಾ ಒಂದು ಯೋಗ್ಯತೆ ನನಗೆ ಇದೆಯೋ ಇಲ್ಲವೋ ಅದು ಬೇರೆಯ ಮಾತು. ಇಲ್ಲ ಅಂತ ನಾನೇನೋ ಖಂಡಿತ ನಂಬಿಕೊಂಡಿದ್ದೇನೆ. ಆದರೂ ಆಹ್ವಾನ ಬಂದ ಇಬ್ಬರು ಮಹನೀಯರಲ್ಲಿ ಒಬ್ಬರು ಕಾರಣಾಂತರದಿಂದ ಸಮ್ಮೇಳನಕ್ಕೆ ಹೋಗಲು ಆಗಲಿಲ್ಲವಾಗಿ ಆ ಸರದಿ ನನ್ನ ಪಾಲಿಗೆ ಬಿತ್ತು. ನನಗೇನಂ? ಹೋಗ್ತಾ ಬರ್ತಾ ಸೆಕೆಂಡ್ ಕ್ಲಾಸ್ ಫೇರ್ ಕೊಟ್ಟರು. ಅಲ್ಲಿಯೋ ಮಜಬೂತಾಗಿ ಊಟ ಉಪಚಾರಕ್ಕೆ ಏರ್ಪಾಡು ಮಾಡಿದ್ದರು. ಇನ್ನೇನಂ ಆಗಬೇಕು?

ಸಮ್ಮೇಳನ ನಡೆದ ನಾಲ್ಕು ದಿನವೂ ರಾಮುಪುರದ ಸಂಭ್ರಮ, ಸಡಗರ ಹೇಳತೀರದು. ದೊಡ್ಡ ರಾಜಕುಮಾರಿಯ ಮದುವೆಯ ಮನೆಯಂತಿತ್ತು. ಊರಿಗೆ ಊರೇ, ಸ್ಟೇಷನ್ನಿಗೆ ಬಂದು ರೈಲು ನಿಲ್ಲುವುದೇ ತಡ ಸ್ವಯಂ ಸೇವಕರು ದಡ ದಡ ಅಂತ ಓಡಿಬಂದು ನಮ್ಮನ್ನು ಸ್ವಾಗತಿಸಿ ಕಾರಿನಲ್ಲಿ ಕರೆದುಕೊಂಡು ಹೋಗಿ ಸರಿಯಾದ ವಠಾರದಲ್ಲಿ ಬಿಡಾರ ಮಾಡಿಸಿದರು.

ಇಳಿಯುವುದಕ್ಕೆ ಸ್ಥಳವೇನೋ ಅಚ್ಚುಕಟ್ಟಾಗಿ ಸಿಕ್ಕಂತಾಯಿತು. ಆದರೆ ಪರಸ್ಥಳದವರಿಗೆ ಅಷ್ಟೇ ಆದರೆ ಸಾಕೆ? ನನಗೇನೋ ಒಂದು ರೀತಿಯ ಅನುಮಾನ ಇದ್ದೇ ಇತ್ತು. ನಾವು ಹೋಗುತ್ತಿರುವುದು ದಕ್ಷಿಣದಿಂದ ಉತ್ತರಕ್ಕೆ. ನಾವು ಬೇಕಾದಷ್ಟು ಬೂಸಿ ಹೊಡೆಯಬಹುದು,

ಭಾರತದ ಜನ ಎಲ್ಲ ಒಂದೇ ಎಂದು. ಅದು ಕೇವಲ ಕನಸಿನ ಮಾತು. ನಾವು ಹಸೀ ಮೆಣಸಿನ ಕಾಯನ್ನು ಹಾಗೆಯೇ ತಿಂದರೆ ಅವರು ಜಿಲೇಬಿಯನ್ನು ಪಾಯಸದಲ್ಲಿ ಅದ್ದಿ ತಿನ್ನುತ್ತಾರೆ. ನಾವು ಕಾಫಿ ಕುಡಿದರೆ ಅವರು ಟೀ ಕುಡಿಯುತ್ತಾರೆ. ಆ ಸಪ್ಪೆ ರೊಟ್ಟಿ, ಸಿಹಿ ಚಟ್ನಿ, ಹಾಲು ಖೋವಾ, ಹೀಗೆ ಬರೀ ಸಿಹಿ ತಿಂಡೀನೇ ತಿಂದರೆ ಮೈ ಕೈಯಲ್ಲಿನ ಶಕ್ತಿ ಕುಗ್ಗಿ ಹೋಗುತ್ತದೆ. ಚಪಾತಿ ಸಾಗು ಇಷ್ಟರಿಂದಲೇ ನಮ್ಮ ರಥ ಸಾಗುವುದಿಲ್ಲ. ಇನ್ನ ನನ್ನ ಗತಿ ಏನಪ್ಪಾ ಎನ್ನುವ ಯೋಚನೆ ನನಗೆ ಇದ್ದೇ ಇತ್ತು.

ಆದರೆ ಅದೇನ್ರಿ ಆ ಅರೇಂಜ್‌ಮೆಂಟು, ಆ ರಾಮಪುರದ ಸಾಹಿತ್ಯ ಸಮ್ಮೇಳನದಲ್ಲಿ. ಎಲ್ಲಾ ಮೂಲೆ ಮೂಲೆಯಿಂದಲೂ ಸಾಹಿತಿಗಳು ಬಂದಿದ್ದರು ತಾನೆ. ಅವರ ರೀತಿ ನೀತಿ, ಜಾತಿ ಮತ, ಶುಚಿ ಅಭಿರುಚಿ ಇವುಗಳಿಗೆ ತಕ್ಕಂತೆ ಊಟದ ಸಾಹಿತ್ಯವನ್ನು ಏರ್ಪಡಿಸಿದ್ದರು ಅಂದರೆ! ಮದರ್ ಆಸ್‌ನವರಿಗೆ ಕೊಳಂಬು, ಇಟ್ಲಿ. ಮೈಸೂರಿನವರಿಗೆ ಹಕ್ಕಿದು ಅನ್ನ, ಶಾರು, ಕಾಫಿ. ಹೀಗೆ ಏರ್ಪಾಡಾಗಿತ್ತು. ಅವರು ಏರ್ಪಾಡು ಮಾಡದೇ ಹೋಗಿದ್ದರೆ ಅಲ್ಲಿನ ಹೋಟಲಿಗೆ ಹೋಗಿ ಸ್ವೀಟ್‌ಮೀಟು ಗಳನ್ನು ತಿಂದು ಸಾಯಬೇಕಾಗಿತ್ತು.

ನಮ್ಮವರು ಆ ಜನಗಳನ್ನು ನೋಡಿ ಬುದ್ಧಿ ಕಲಿಯಬೇಕಂ. ಮದರ್ ಆಸಿನಲ್ಲಿ ಸಮ್ಮೇಳನ ಆದಾಗ ಗಿಳಿಗೆ ಬುದ್ಧಿ ಹೇಳಿದಹಾಗೆ ಹೇಳಿದೆ. ಅಯ್ಯಾ ಅನ್ನ ಹಾಕಿ. ಅಧ್ವಾನ್ನ ಹಾಕಬೇಡಿ. ಬರೀ ಉಪನ್ಯಾಸದಿಂದ ಊಟ ಮಾಡಿದ ತೃಪ್ತಿ ಆಗುವುದಿಲ್ಲ. ಕತೆ ಬರೆಯುವವನಿಗೂ ಕಾಫಿ ಬೇಕು, ಅಂತ. ಎಲ್ಲಾ ನನ್ನ ಹಾಸ್ಯಮಾಡಿಬಿಟ್ಟರು, ಹೃದಯಕ್ಕಿಂತ ಇವನಿಗೆ ಹೊಟ್ಟೆ ದೊಡ್ಡದು ಎಂದು. ನೋಡಿದಿರೋ ಇಲ್ಲವೊ ಆ ವರ್ಷ ಸಮ್ಮೇಳನ ಎಷ್ಟು ಸಕ್ಸಸ್‌ಫುಲ್ ಆಯಿತು ಅಂತ. ಅಲ್ಲಿಗೆ ಹೋದವರಿಗೆಲ್ಲ ಅರೆ ಹೊಟ್ಟೆ ಊಟ. ಗತಿ ಪ್ರಗತಿಯ ಹೊಡೆದಾಟ ಹಸಿದ ಸಿಂಹದ ಕಾಳಗದಂತಿತ್ತಲ್ಲ ಅದಕ್ಕೆ ಕಾರಣ ಈ ಅರ ಹೊಟ್ಟೆ, ಈ ನರ ಹೊಟ್ಟೆ, ಈ ಬರಿ ಹೊಟ್ಟೆ.

ಮೊನ್ನೆ ನೋಡಿ, ಮೊನ್ನೆ ತಾನೆ ಯಾರೋ ಸಮ್ಮೇಳನ ಸೇರಿಸಿದ್ದರಲ್ಲ, ಅದರ ಕತೆ ಗೊತ್ತು ತಾನೆ. ಮೇಲೆ ರಣ ರಣ ಅಂತ ಬಿಸಿಲು, ಕೆಳಗೆ

ರಸ್ತೆಯು ಕೆಂಪಾದ ಕಾದ ಧೂಳು. ಆ ಧೂಳಿನಲ್ಲಿ ಎಲೆ. ಎಲೆಯ ಮೇಲೆ ಊಟ. ಕೊಂಕುಳಲ್ಲಿ ರೊಟ್ಟಿ ಇರುಕಿಸಿಕೊಂಡು ಬಂದು ಬಡಿಸಿದ್ದು ಬಡಿಸಿದ್ದೆ. ಹೀಗೆ ಮಾಡಿದರೆ ಯಾವ ಕವಿಗೆ ತಾನೇ ಪ್ರತಿಭೆ ಕೊನರುತ್ತದೆ ಹೇಳಿ.

ಅಂತೂ ರಾಮಪುರದ ಊಟದ ವೈಭವವನ್ನು ಎಷ್ಟು ಹೊಗಳಿದರೂ ತೀರದು ಅನ್ನಿ.

ಮೊದಲನೆಯ ದಿನ ತಿಂಡಿ ಗಿಂಡಿ ಆದ ನಂತರ ಸಭೆ ಸೇರಿತು. ಎಲ್ಲಾ ಭಾಷೆಯ ಸಾಹಿತಿಗಳನ್ನೂ ಕಲೆ ಹಾಕಿದ್ದರು ಅನ್ನಿ. ಅದರಲ್ಲಿ ಮೊದಲು ಮಾತನಾಡಿದವರು ಇಂಗ್ಲಿಷ್ ಕಾದಂಬರಿಕಾರರು. ಅನಂತರ ವಿಸ್ತಾರ ಭಾರತದ ಎಲ್ಲಾ ಭಾಷೆಗಳ ಪ್ರತಿನಿಧಿಗಳೂ ತಮ್ಮ ತಮ್ಮ ಭಾಷೆಯಲ್ಲಾಗುತ್ತಿರುವ ವಿವಿಧ ಸಾಹಸಗಳನ್ನು ಸಂಗ್ರಹಿಸಿ ವಿವರಿಸಿದರು. ಬಹಳ ಸ್ವಾರಸ್ಯವಾಗಿತ್ತು ಅನ್ನಿ. ಆದರೆ ನಾನು ಅಲ್ಲಿ ಹೆಚ್ಚು ಹೊತ್ತು ಇರಲಾಗಲಿಲ್ಲ. ಕೇವಲ ಐದು ಆರು ನಿಮಿಷಗಳು ಮಾತ್ರ ಇದ್ದು ಊರನ್ನು ನೋಡಲು ಹೋಗಿ ಬಂದೆವು. ಇವರ ಭಾಷಣಗಳೆಲ್ಲ ಅಚ್ಚಾಗಿ ಬರುತ್ತವೆ. ಆಗ ಓದಬಹುದು. ಆದರೆ ರಾಮಪುರವನ್ನು ಮತ್ತೆ ಬಂದು ನೋಡಲು ಆಗುತ್ತದೆಯೆ? ಒಂದು ದೊಡ್ಡ ರೌಂಡ್ ಹೋಗಿ ಬಂದೆವು.

ಮಾರನೆಯ ದಿನ ಸಂಜೆ ಮತ್ತೆ ಸಮ್ಮೇಳನ. ಕಾಫಿ, ತಿಂಡಿ. ನಾವು ನೋಡಿ ಕಲಕತ್ತೆಯಲ್ಲಿ ಸಾಹಿತಿಗಳ ಮೀಟಿಂಗ್ ಏರ್ಪಡಿಸಿದಾಗ ವೆಸ್ಟ್ ಎಂಡ್‌ನಲ್ಲೋ ಗ್ರ್ಯಾಂಡ್ ಹೋಟಲಿನಲ್ಲೋ ಸೇರುತ್ತಿದ್ದೆವು. ನಾವು ಆಗ ಮೊದಲು ಮಾಡುತ್ತಿದ್ದ ಕೆಲಸವೆಂದರೆ ತಿಂಡಿ ಕತ್ತರಿಸುವುದು. ಅನಂತರ ಬೇಕ ಬೇಕಾದವರು ಬೇಕ ಬೇಕಾದ ವಿಷಯದಲ್ಲಿ ತಮ್ಮ ತಮ್ಮಲ್ಲೇ ಚರ್ಚೆ ಮಾಡಿಕೊಳ್ಳುತ್ತಿದ್ದರು. ಊರಿಗೊಬ್ಬ ಹೊರತು ಎನ್ನುವಂತೆ ಅಲ್ಲಿ ಸೇರಿದವನು ನಾನೊಬ್ಬನೇ. ನನ್ನ ಭಾಷೆ ಅವರಿಗೆ ತಿಳಿಯದು. ನನ್ನ ಸಾಹಿತ್ಯದಲ್ಲಿ ನಾನು ಹೇಳಿದುದೇ ಕೊನೆಯ ಮಾತು. ಪ್ರತಿ ಸಭೆಯಲ್ಲೂ ನಾನು ಹತ್ತು ನಿಮಿಷ ರೈಲು ಬಿಡುತ್ತಿದ್ದೆ ಅನ್ನಿ. ನಮಗೆಲ್ಲಿ ವಿರಾಮವಾಗಿ ಕಾಲ ಸಿಗುತ್ತದೆ ಹೇಳಿ, ಓದಿ ಬರೆದು ವ್ಯಾಸಂಗ ಮಾಡುವುದಕ್ಕೆ. ಬಂಗಾಲ ಭಾಷೆಯನ್ನು ಬೇರೆ ಕಲಿಯಬೇಕಾಗಿತ್ತು.

ಅಲ್ಲಿನ ಗುದ್ ಗ್ರಂಥವನ್ನು ನನ್ನ ಭಾಷೆಗೆ ಇಳಿಸಬೇಕಾಗಿತ್ತು. ಇಷ್ಟರ ಮಧ್ಯೆ ಓದುವ ಹವ್ಯಾಸ ಎಲ್ಲಿಯದು ಹೇಳಿ. ಅಂತೂ ವಾರಕ್ಕೊಂದು ಸಾರಿ ಮೀಟಿಂಗ್ ಆಗುವಲ್ಲಿಗೆ ಹೋಗಿ ಕಾಫಿ ಗಿಟ್ಟಿಸದೆ ಬಿಡುತ್ತಿರಲಿಲ್ಲ.

ರಾಮಪುರದ ಕಾರ್ಯಕ್ರಮದಲ್ಲಿ ಅತಿ ಮುಖ್ಯವಾದುದು ಉರ್ದು ಮುಷಾಯಿರ. ಅಲ್ಲಿ ಉರ್ದು ಹಿಂದಿ ಮರಾಠಿ ಇವು ಪ್ರಬಲತಾನೆ. ಬಹಳ ಜನ ಸೇರಿದ್ದರು. ಮುಷಾಯಿರ ಬಹಳ ಸ್ವಾರಸ್ಯವಾಗಿತ್ತು. ನಾನು ಬಹಳ ಹೊತ್ತು ಇರಲಾಗಲಿಲ್ಲ ಅನ್ನಿ, ನಲವತ್ತು ಐವತ್ತು ಜನ ಕವಿಗಳು ತಮ್ಮ ಕವನಗಳನ್ನು ಓದಿ ಮುಗಿಸುವವರೆಗೂ ಯಾರು ಕಾದು ನಿಲ್ಲುತ್ತಾರೆ ಹೇಳಿ. ಕಾಫಿ ಕುಡಿದು ಅಲ್ಲಿಂದ ಗಾಡಿ ಬಿಟ್ಟದ್ದೆ.

ನಮ್ಮ ಸಾಹಿತ್ಯದಲ್ಲಿ ಒಂದಾಗಿದೆ ನೋಡಿ. ಲೇಖಕರಿಗೆ ಸರಿಯಾದ ಪ್ರತಿಫಲ ದೊರೆಯುತ್ತಿಲ್ಲ ಎಂಬ ಕೂಗು ಇತ್ತೀಚೆಗೆ ಒಹಳವಾಗುತ್ತಿದೆ ಯಷ್ಟೆ. ಈಗ ನೋಡಿ ಏನೂ ಪ್ರತಿಫಲ ಕೊಡದೇ ಇದ್ದಾಗ ಉತ್ತಮವಾದ ಲೇಖನಗಳು ತಾವಾಗಿಯೇ ಬರುತ್ತಿದ್ದವು. ಈಗ ದುಡ್ಡು ಕೊಟ್ಟು ಬರೆಸಿದರೂ ಅವು ಓದುವ ಹಾಗಿರುವುದಿಲ್ಲ. ಲೇಖಕರು ಹೆಸರಾಂತವ ರಾಗಿದ್ದರೂ ಲೇಖನ ಹೆಸರಾಂತುವಾಗುವುದಿಲ್ಲ. ಕಾಸು ಕೊಟ್ಟು ಕಗ್ಗ ಕೊಂಡು ಪತ್ರಿಕೆಯವರು ತುಂಬುತ್ತಿದ್ದಾರೆ. ಕದ್ದು ಒರೆಯುವವರೂ ಕಾಸು ಕೊಡು ಎನ್ನುತ್ತಾರೆ. ಅದನ್ನು ಸಹ ನಾವು ತಿದ್ದಿ ಅಚ್ಚು ಮಾಡ ಬೇಕಾಗಿದೆ. ಈ ಪ್ರಶ್ನೆ ರಾಮಪುರದಲ್ಲಿ ಬಂತು. ನಾವು ಹಿಂದೆ ಒರೆಯುತ್ತ ಇದ್ದವರೆಂದರೆ ಎಂಟು ಹತ್ತು ಜನ ಅಷ್ಟೆ. ಆಗ ಪತ್ರಿಕೆಯ ಸಂಪಾದಕರು ಸುಲಭವಾಗಿ ಕೊಡುತ್ತಿದ್ದರು. ಈಗ ಎಲ್ಲರೂ ಬರೆಯೋರೆ. ಎಲ್ಲರೂ ದುಡ್ಡು ಕೇಳೋರೆ. ಮನೆಗೆ ಇಬ್ಬರು ಬರಹಗಾರರಾದ ಓದುವವರಾರು? ಅಚ್ಚುಮಾಡುವವರಾರು? ಮೆಚ್ಚಿ ಪ್ರತಿಫಲ ಕೊಡುವವರಾರು?

ಈ ದೃಷ್ಟಿಯಿಂದ ಹುಡುಗಸಾಹಿತಿಗಳ ಈ ನಿರ್ಣಯವನ್ನು ಒಪ್ಪ ಬಾರದೆಂದು ನನ್ನ ಅಭಿಮತ. ಆದರೆ ರಾಮಪುರದಲ್ಲಿ ಅದಕ್ಕೆ ಬೆಂಬಲ ಸಿಕ್ಕು ನಿರ್ಣಯ ಅಂಗೀಕೃತವಾಯಿತು. ಹಾಗಾಯಿತು ಅಂದು ನನ್ನ ಸ್ನೇಹಿತರು ಹೇಳಿದರು. ಏಕೆಂದರೆ ಕಾಫೀಗೇ ಅಂತ ಹೋದ ನಾವು ಹಿಂತಿರುಗುವುದರಲ್ಲಿ ಸಮ್ಮೇಳನದಲ್ಲಿ ಮಂಗಳ ಹಾಡುತ್ತಿದ್ದರು.

ರಾಮಪುರದ ಸಾಹಿತ್ಯ ಸಮ್ಮೇಳನದಲ್ಲಿ ಪ್ರತಿನಿಧಿಗಳು ತಮ್ಮ ತಮ್ಮ ದೇಶ ಭಾಷೆಯಲ್ಲೇ ಮಾತನಾಡಬೇಕೆಂಬ ಕಡ್ಡಾಯವಿತ್ತು. ನಾನು ಸಣ್ಣ ಕತೆಗಳ ಬೆಳವಣಿಗೆಯನ್ನು ಕುರಿತು ಮಾತನಾಡಿದೆ. ನನ್ನ ಭಾಷಣವನ್ನು ಕೇಳಿ ಕಾರ್ಯದರ್ಶಿಗಳು "ನಿಮ್ಮ ಭಾಷೆ ಬಹಳ ಮೃದುವಾದುದು ಸಾರ್, ತಮಿಳಿನಂತೆ." ಎಂದು ಪ್ರಶಂಸೆ ಮಾಡಿದರು. ನಾನು ಉತ್ತರ ಕೊಡುತ್ತ ಮುಗುಳು ನಗೆಯನ್ನು ಬೀರಿ "ನಿಮ್ಮ ಭಾಷೆಗಿಂತ ನಿಮ್ಮ ಕಾಫಿ ತಿಂಡಿ ಬಹು ಚೆನ್ನು ಸ್ವಾಮಿ" ಎಂದೆ.

ನೋಡಬೇಕು: ಸಮ್ಮೇಳನದ ನೆನಪಿಗಾಗಿ ಒಂದು ದೊಡ್ಡ ಗ್ರಂಥ ವನ್ನು ಅಚ್ಚುಮಾಡಬೇಕೆಂದಿದ್ದಾರೆ. ನನ್ನ ಲೇಖನವನ್ನು ನನ್ನ ಫೋಟೋ ಬ್ಲಾಕನ್ನು ಕೊಟ್ಟು ಬಂದಿದೇನೆ.

ನನ್ನ ಆಶೆ ಏನೆಂದರೆ ನಮ್ಮ ಜನಾನೂ ಅಂಥಾ ಸಮ್ಮೇಳನಗಳನ್ನು ಮಾಡಬೇಕು ಎಂದು. ಮಾಡಬೇಕು. ಜನ ಸೇರಬೇಕು. ನಾಡು ನಲಿಯಬೇಕು. ಗುಡಿ ಕಟ್ಟಬೇಕು. ಕಾಫಿ ಕುಡಿಯಬೇಕು. ತಿಂಡಿ ತಿನ್ನಬೇಕು. ಊಟ ಮಾಡಬೇಕು. ಪರಸ್ಪರ ಅರ್ಥ ಮಾಡಿಕೊಳ್ಳಬೇಕು.

ಏನಪ್ಪ, ಅಂಥಾ ಕಾಲ ಎಂದಿಗೆ ಬರುತ್ತದೆ ನಮ್ಮ ನಾಡಿನಲ್ಲಿ?



# ಪುಸ್ತಕಗಳು

ಸಾಮರ್‌ಸೆಟ್ ಮಾಮ್ ತನ್ನ ಸ್ನೇಹಿತನನ್ನ ಒಂದು ಸಾರಿ ಕೇಳಿದನಂತೆ ಏಕೆ ಅವನು ಯಾವುದಾದರೂ ಪುಸ್ತಕವನ್ನು ಬರೆಯ ಬಾರದು ಎಂದು. ಅದಕ್ಕೆ ಅವನ ಸ್ನೇಹಿತ ಹೇಳಿದನಂತೆ "ಯಾವ ವಿಚಾರವನ್ನು ಕುರಿತು ಬರೆಯಬೇಕು ಎನ್ನುವುದೇ ನನಗೆ ಖಚಿತವಾಗಿ ತಿಳಿದಿಲ್ಲ. ಅದಕ್ಕಾಗಿ ನಾನು ಏನನ್ನೂ ಬರೆಯಲಾರೆ" ಎಂದು. ಅದಕ್ಕೆ ಮಾಮ್ ನಕು "ನಿಜ. ಪುಸ್ತಕ ಬರೆಯದಿರುವುದಕ್ಕೆ ನೀನು ಹೇಳುವ ಕಾರಣಕ್ಕಿಂತ ಹೆಚ್ಚು ಸತ್ಯವಾದದ್ದು ಬೇರೆ ಯಾವುದೂ ಇಲ್ಲ" ಎಂದು ಹೇಳಿದನಂತೆ.

ಇದು ಬಹಳ ಮುಖ್ಯವಾದ ವಿಚಾರ. ಏಕೆಂದರೆ ಪುಸ್ತಕ ಬರೆಯು ವವರೆಲ್ಲ ಇದನ್ನ ಗಮನಿಸಿದರೆ ಒಳ್ಳೆಯದು ಓಡಿ ಹೋಗಿ ಗೋಡೆ ಮುಟ್ಟಿ ಬಂದಹಾಗೆ ಏನೂ ವಿಚಾರವಿಲ್ಲದೆ ಪುಸ್ತಕ ಬರೆಯುವುದು ಸರಿಯಲ್ಲ. ಏನೂ ಇಲ್ಲದೆ ಗಂಟೆ ಗಟ್ಟಲೆ ಭಾಷಣ ಮಾಡಬಹುದು. ಏನೂ ಇಲ್ಲದೆ ದಿನ ಗಟ್ಟಲೆ ಪಾಠ ಹೇಳಬಹುದು. ಆದರೆ ಏನೂ ಇಲ್ಲದೆ ಬರೆಯುವುದು ಕಷ್ಟ. ಏಕೆಂದರೆ ನಮ್ಮ ಹಿರಿಯರು ಹೇಳಿದ್ದಾರೆ ನೋಡಿ ಗಾದೆ ಮಾತಾಗಿ, ಹತ್ತು ಮಾತನಾಡು ಆದರೆ ಒಂದಕ್ಷರ ಬರೆಯಬೇಡ ಎಂದು. ಮಾತನಾಡಿದಾಗ ನಮ್ಮ ದಡ್ಡತನ ಈ ಕಿವಿಯಿಂದ ಹಾದು ಆಕಡೆ ಹೋಗಿಬಿಡುತ್ತದೆ. ಬರೆದಾಗ ಹಾಗಲ್ಲ ಯಾರು ಓದಲಿ ಬಿಡಲಿ ದಡ್ಡತನ ಅಶೋಕನ ಶಿಲಾ ಶಾಸನದಂತೆ ಭದ್ರವಾಗಿಬಿಡುತ್ತದೆ.

ಆದರೆ ನಮ್ಮಲ್ಲನೇಕರು ವಿಷಯವಿಲ್ಲದೆ ಬರೆಯುತ್ತಿರುವವರು ಇಲ್ಲದೆ ಇಲ್ಲ. ಏಕೆಂದರೆ ನಮಗೆ ವಿದ್ವಾಂಸರು ಹೇಳಿರುವಂತೆ ವೇದಗಳಲ್ಲಿ ಎಲ್ಲಾ

ಅಡಗಿದೆ. ನಮ್ಮವರು ಹಿಂದೆಯೆ ಎಲ್ಲವನ್ನೂ ಹೇಳಿಬಿಟ್ಟಿದ್ದಾರೆ. ಹಾಗಿದ್ದೂ ನಾವು ಮತ್ತೆ ಮತ್ತೆ ಹೊಸ ಪುಸ್ತಕಗಳನ್ನು ಬರೆಯುವುದರಲ್ಲಿ ಅರ್ಥವೇನಿದೆ? ನೋಡಿ ನಾಟಕವನ್ನು ಪದ್ಯ ಮಾಡುವುದು, ಗೀತವನ್ನು ಗದ್ಯ ಮಾಡುವುದು, ಚಂಪುವನ್ನು ಇಂಪು ಮಾಡುವುದು, ದಪ್ಪನಾಗಿರುವುದನ್ನು ಸಂಗ್ರಹಿಸುವುದು, ಅವರೆಲ್ಲ ಹೇಳಿದ್ದನ್ನು ಇವರು ಹೇಳುವುದು ಇನ್ನೊಬ್ಬ ಹೇಳಿದ್ದನ್ನು ವಿವರಿಸುವುದು – ಹೀಗೆ ಮಾಡಿ ಪುಸ್ತಕದ ಮೇಲೆ ಪುಸ್ತಕ ಅಚ್ಚು ಹಾಕಿದರೆ ಏನು ಗತಿ! ಹಳಗನ್ನಡದ ಪುಸ್ತಕವನ್ನು ಹೊಸಗನ್ನಡದಲ್ಲೂ ಅಥವಾ ಭವಿಷ್ಯದ ಕನ್ನಡದಲ್ಲೂ ಬರೆದರೆ ಆಗುವ ಉದ್ಧಾರವೇನು?

ಇನ್ನು ಭಾಷೆಯಿಂದ ಭಾಷೆಗೆ ಬೇರೆ ಸಾಹಿತ್ಯದ ಹೊರೆಯನ್ನು ಸಾಗಿಸುವ ಕಾರ್ಯ ನಡೆಯುತ್ತಲಿದೆ. ಹೆಸರು ಬೇಸೆ ಎಲ್ಲ ಹೇಳಿ ಮೂಲ ಲೇಖಕರಿಗೆ ತಮ್ಮ ಗೌರವವನ್ನು ಸೂಚಿಸಿ ಮೂಲದ ಭಾಷಾಂತರ ಮಾಡುವುದು ಒಂದು ರೀತಿ. ಕೇವಲ ಅನುವಾದಿತ ಎಂದು ಹೆಸರಿಡುವುದು ಮತ್ತೊಂದು ರೀತಿ. ಇದಕ್ಕಿಂತ ವಿಚಿತ್ರವಾದ ಕ್ರಮವೊಂದಿದೆ. ಮೂಲದಿಂದ ಕದ್ದು ಹೆಸರು ಬೆನೆಗಳನ್ನು ಹೇಳದೆ ಇಳಿಸಿಬಿಡುವುದು. ಅಥವಾ ಆಧಾರಿತ ಎಂದು ಹೇಳಿ ಮೂಲವನ್ನು ಬದಲಾಯಿಸುವ ಪ್ರಭೂತಿಗಳುಂಟು. ಅಂತೂ ಬರೆದದ್ದೇ ಬರೆಯುವುದು, ಹೇಳಿದ್ದೇ ಹೇಳುವುದು. ಹೀಗಾಗಿ ಪುಸ್ತಕವನ್ನು ಕೊಂಡು ಓದುವವರಿಗೆ ಕಷ್ಟವಾಗಿಬಿಟ್ಟಿದೆ. ನನ್ನ ಮೇಜನ್ನು ನೋಡಿ – ದೊಡ್ಡ ಅರಣ್ಯವಾಗಿಬಿಟ್ಟಿದೆ. ಮಾಂದಳಿರು, ನವಿಲು, ಒಂದೇ ದಾರಿ, ಸಿಡಿಲು, ಹಾವು, ಎಲ್ಲ ಸೇರಿ ಹೆದರಿಕೆಯಾಗುತ್ತಿದೆ. ಮೇಲೆ ಕುರುಕ್ಷೇತ್ರ ಕೆಳಗೆ ಕಸದ ಬುಟ್ಟಿ, ಅಕ್ಕ ಪಕ್ಕಗಳಲ್ಲಿ ಪತ್ರಿಕೆಗಳ ರಾಶಿ. ಎಲ್ಲ ಅಲ್ಲೋಲ ಕಲ್ಲೋಲ, ಎಲ್ಲ ಅಡ್ಡಾದಿಡ್ಡಿ. ಪುಸ್ತಕಗಳ ಭಾರದಿಂದ ನನ್ನ ಮೇಜು ತಿಣುಕುತ್ತಿದೆ. ಹೀಗಾಗಿದ್ದರೂ ಪುಸ್ತಕಗಳು ಹೊಸದಾಗಿ ಬರುತ್ತಲೇ ಇವೆ.

ಒಬ್ಬ ಲೇಖಕಿ ಸಂಪಾದಕರನ್ನು ಕೇಳಿದಳಂತೆ, ಒಂದು ಕಾದಂಬರಿ ಎಂದರೆ ಎಷ್ಟು ದೊಡ್ಡದಾಗಿರಬೇಕು ಎಂದು. ಅದಕ್ಕವರು ಹೇಳಿದರಂತೆ ಅದು ಹೀಗೆ ಎಂದು ಖಚಿತವಾಗಿ ಹೇಳಲು ಅಸಾಧ್ಯವಾದುದು. ಒಬ್ಬೊ

ಬ್ಬರು ಒಂದೊಂದು ಗಾತ್ರದಲ್ಲಿ ಬರೆದಿದ್ದಾರೆ. ಸಾಧಾರಣವಾಗಿ ಮುನ್ನೂರು ಪುಟಗಳಿದ್ದರೆ ಸಾಕು ಎಂದು. ಆಗ ಲೇಖಕಿ ಹೋ ನನ್ನ ಕಾದಂಬರಿ ಮುಗಿಯಿತು ಎಂದುಕೊಳ್ಳುತ್ತ ಹೊರಟು ಹೋದಳಂತೆ.

ಮುನ್ನೂರು ಪುಟವಾದರೆ ಕಾದಂಬರಿಯಾಯಿತೆ? ಉದ್ದವಾದುದೆಲ್ಲ ನೀಳ್ಗವನಗಳೆ? ನೂರಿಪ್ಪತ್ತು ಪುಟಗಳ ಪುಸ್ತಕಗಳೆಲ್ಲ ಪಠ್ಯ ಪುಸ್ತಕಗಳಾಗಬಲ್ಲವೆ? ದಿನಕ್ಕೆ ಹತ್ತು ಹೊಸ ಪುಸ್ತಕಗಳು ಅಚ್ಚಾಗುತ್ತಿರುವಾಗ ಯಾವುದನ್ನು ಓದುವುದು ಯಾವುದನ್ನು ಬಿಡುವುದು!

ಮೊನ್ನೆ ಸಾಹಿತಿಗಳ ಸಂಘದಲ್ಲಿ ಯಾವುದೋ ವಿಚಾರಕ್ಕಾಗಿ ಎಲ್ಲ ಸೇರಿದಾಗ ನನ್ನ ಮಿತ್ರರು ನನ್ನನ್ನು ಕುರಿತು ಆಧುನಿಕ ಕವಿಗಳೊಬ್ಬರ ಕಾವ್ಯವನ್ನು ಓದಿದ್ದೀನೆಯೆ ಎಂದು ಪ್ರಶ್ನೆ ಮಾಡಿದರು. ಇಲ್ಲ, ಓದಲಾಗಲಿಲ್ಲ ಎಂದು ನಾನು ತಲೆಯಾಡಿಸಿದೆ. ಅದಕ್ಕೆ ಅವರು ಆಶ್ಚರ್ಯವನ್ನು ಸೂಚಿಸಿ ತಾವು ಹೇಳಿದ ಪುಸ್ತಕ ಅಚ್ಚಾಗಿ ಮೂರು ತಿಂಗಳಾಗಿದ್ದರೂ ನಾನು ಅದನ್ನು ಓದಲಿಲ್ಲವೆಂದು ಹೇಳುತ್ತಿರುವುದು ಸೋಜಿಗದ ಸಂಗತಿ ಎಂದರು. ಆಗ ನಾನು ಸ್ವಲ್ಪ ತೀವ್ರವಾಗಿ ಕೇಳಬೇಕಾಯಿತು "ಏನ್ರಿ ನೀವು ಕುಮಾರ ವ್ಯಾಸನನ್ನ ಓದಿದೀರಾ?" ಎಂದು. ಇಲ್ಲ ಎಂದವರು ತಲೆಯಾಡಿಸಿದಾಗ ನಾನು "ಅಲ್ರಿ ಕುಮಾರವ್ಯಾಸ ತನ್ನ ಕಾವ್ಯವನ್ನು ಬರೆದು ಐನೂರು ವರ್ಷಗಳಾಗಿದೆ. ಇನ್ನೂ ನೀವು ಅದನ್ನ ಓದಿಲ್ಲವೆ?" ಎಂದು ಪ್ರತಿ ಪ್ರಶ್ನೆಯನ್ನು ಕೇಳಬೇಕಾಯಿತು.

ವಿಷಯ ಬಹಳ ಸಂಕೀರ್ಣವಾದದ್ದು. ಪುಸ್ತಕ ಕೊಂಡು ಓದುವಷ್ಟು ದುಡ್ಡು ನನ್ನಲ್ಲಿಲ್ಲ. ನಾನು ಎಂತ ಏಕೆ ಹೇಳಿಕೊಳ್ಳಲಿ. ಅನೇಕ ದೊಡ್ಡವರು ಸಹ ಪುಸ್ತಕ ಕೊಳ್ಳುವುದಿಲ್ಲ. ಕಾಂಪ್ಲಿಮೆಂಟರಿ ಕಾಪಿಗಳಿಂದ ಬೀರುವನ್ನು ಭರ್ತಿಮಾಡಿರುವ ಭೂಪರೇ ಹೆಚ್ಚು. ಅವುಗಳನ್ನೂ ಓದಿ ತಿಳಿದುಕೊಳ್ಳುವ ಮಂದಿ ಬಹಳ ಕಡಿಮೆ. ಕೊಟ್ಟ ಕಾಪಿಗಳನ್ನು ಮಾರಿಕೊಳ್ಳುವವರೂ ಉಂಟು. ಬರ್‌ನಾರ್ಡ್ ಷಾ ತನ್ನ ಸ್ನೇಹಿತರೊಬ್ಬರಿಗೆ "ವಿಶ್ವಾಸ ಪೂರ್ವಕ" ಎಂದು ಬರೆದು ತನ್ನದೊಂದು ಕೃತಿಯನ್ನು ಕೊಟ್ಟನಂತೆ. ಎರಡು ತಿಂಗಳ ಮೇಲೆ ಯಾವುದೋ ಒಂದು ಗುಜರಿ ಅಂಗಡಿಯಲ್ಲಿ ಅದೇ ಕೃತಿ ಇದ್ದುದನ್ನು ಷಾ ಕಂಡು ಆಶ್ಚರ್ಯದಿಂದ

ಅದನ್ನು ಕೊಂಡು " ವಿಶ್ವಾಸದಿಂದ. ಮತ್ತೊಮ್ಮೆ!" ಎಂದು ಬರೆದು ಹಿಂದೆ ಯಾರಿಗೆ ಅದನ್ನು ಕೊಟ್ಟಿದ್ದನೋ ಅವರಿಗೇ ಕಳುಹಿಸಿದನಂತೆ. ನನ್ನ ಮೇಜನ್ನು ಖಾಲಿ ಮಾಡಿಬಿಡೋಣ ಎಂದರೆ ಷಾನ ಗುಂಪಿನವರ ಹೆದರಿಕೆ ನನಗೆ ಬಹಳ. ಹಳೆಯದೇ ಬೇಕಾದಷ್ಟು ಇರುವುದರಿಂದ ಹೊಸತನ್ನು ಓದಲು ನನಗೆ ಅಷ್ಟಾಗಿ ಮನಸ್ಸು ಬರುವುದಿಲ್ಲ. ಏನಾದರೂ ಹೊಸ ಪುಸ್ತಕವನ್ನು ನಾನೇಕೆ ಬರೆಯಬಾರದು ಎಂಬ ಆಶೆ ಆಗಾಗ ಮೂಡುವುದು ಸಹಜವಾದರೂ ಈಚೆಗೆ ಬರೆಯಲು ಹೆದರಿಕೆಯಾಗುತ್ತಿದೆ; ಪಂಪನನ್ನು ಓದಿ ಮತ್ತು ಸಾಮರ್‌ಸೆಟ್ ಮಾಮ್‌ನ ವಿನಯೋಕ್ತಿಯನ್ನು ಕೇಳಿ. ಏಕೆಂದರೆ ಪಂಪನ ಮಹಾ ಕಾವ್ಯದ ಮುಂದೆ ನನ್ನ ಕಿರು ಕಾವ್ಯ ಬೇಡ. ಅವನ ಆದಿ ಕಾವ್ಯದ ಮುಂದೆ ನಮ್ಮ ಬೀದಿ ಕಾವ್ಯ ಅನವಶ್ಯಕ. ಅವನ ಹೆದ್ದಾರಿಯ ಎದುರು ನಮ್ಮ ಗಲ್ಲಿ ಅಲ್ಪ. ಪಂಪನನ್ನು ಓದಿದಾಗಲೇ ನಮ್ಮ ಮನಸ್ಸು ಇಷ್ಟು ಹಸನಾಗುತ್ತದಲ್ಲ, ಇನ್ನ ವೇದ ಉಪನಿಷತ್ತುಗಳು, ಭಾಸ, ಕಾಳಿದಾಸ, ಭವಭೂತಿ ಇವರ ಕಾವ್ಯಗಳನ್ನು ಓದಿದರೆ ಏನಾಗ ಲಿಕ್ಕಿಲ್ಲ. ಆದಕ್ಕೇ ಒಬ್ಬ ಹೇಳಿದನಂತೆ ಹೊಸತನ್ನು ಬರೆಯಬೇಕೆಂದಿದ್ದರೆ ಹಳೆಯ ಸಾಹಿತ್ಯವನ್ನು ಓದಬೇಡ ಎಂದು! ವ್ಯಾಕರಣ ತಿಳಿದಿದ್ದರೆ ತಾನೆ ಸರಿ ತಪ್ಪಿನ ವಿವೇಚನೆ. ಅದೇ ಬೇಡವೆಂದು ಹೇಳಿದರಾಯಿತು. ಆಗ ಬರೆದದ್ದೇ ಭಾಷೆ. ಹೇಳಿದ್ದೇ ಹಾಡು. ಕಟ್ಟಿದ್ದೇ ಕವನ. ಹೊಸೆದುದೇ ಹರಟೆ. ನನಗೇನೋ ಹಾಗೆ ಮಾಡಲು ಕೈ ಬರಲಿಲ್ಲ.

ಬರಲಿಲ್ಲ ಎನ್ನುವುದು ಉಪಚಾರದ ಮಾತು. ಬರೆಯಲಿಕ್ಕೆ ಆಗಲಿಲ್ಲ ಎನ್ನುವುದು, ಓದಲಿಕ್ಕೆ ಆಗಲಿಲ್ಲ ಎನ್ನುವುದು, ಸತ್ಯವಾದ ಮಾತು. ತಲೆಯಲ್ಲಿ ಏನಾದರೂ ವಿಚಾರಗಳಿದ್ದರೆ – ಅವು ಹೊಸವಾಗಿದ್ದರೆ – ಬರೆಯ ಬಹುದು. ಏನೂ ಇಲ್ಲದಿದ್ದರೆ ಶೂನ್ಯದ ಮೇಲೆ ಬರೆದರಾಯಿತು. ಸೊನ್ನೆಯ ಮೇಲೆ ಯಾವ ವೇದದಲ್ಲೂ ಉಪನ್ಯಾಸವಿದ್ದಂತೆ ಕಾಣುವು ದಿಲ್ಲ. ಆದುದರಿಂದ ನಾನು ಹೇಳುವುದೇನೆಂದರೆ ನನ್ನ ಬಳಗದವರು ಶೂನ್ಯದ ವಿಚಾರದಲ್ಲಿ ವಿಷಯಗಳನ್ನು ಸಂಪಾದಿಸಿ ಒಂದು ಪುಸ್ತಕವನ್ನು ಬರೆಯುವುದು ಹಿತಕರ.

ಪುಸ್ತಕಗಳನ್ನು ಓದುವ ವಿಚಾರದಲ್ಲಿ ನಾನು ಏನು ಅಭಿಪ್ರಾಯವನ್ನು

ಇಟ್ಟುಕೊಂಡಿದ್ದೇನೆ ಎನ್ನುವುದನ್ನು ಸೂಕ್ಷ್ಮವಾಗಿ ಮೊದಲೇ ತಿಳಿಸಿದ್ದೇನೆ. ಆಸಕ್ತಿಯಿಂದ ಪುಸ್ತಕಗಳನ್ನು ಓದುವುದು ಅಂತಿರಲಿ, 'ವಿಮರ್ಶೆಗಾಗಿ' ಎಂದು ಬಂದವುಗಳನ್ನು ಓದುವುದೂ ಅಪರೂಪ. ಪುಸ್ತಕದ ಮುನ್ನುಡಿ, ಹಿನ್ನುಡಿ, ಬೆನ್ನುಡಿ, ಇವನ್ನು ಓದಿ ಪುಸ್ತಕದ ಹಾಳೆಗಳನ್ನು ಅಲ್ಲಿಷ್ಟು ಇಲ್ಲಿಷ್ಟು ಕೆದಕಿ ವಿಮರ್ಶೆ ಬರೆದುಬಿಡುತ್ತೇನೆ. ಪುಸ್ತಕದ ಗಾತ್ರವನ್ನು ಕುರಿತು ಹೆಚ್ಚು ಮಾತನಾಡಿ ಅದರ ಸೂತ್ರವನ್ನು ಏಕ ವಾಕ್ಯದಲ್ಲಿ ಸೂತ್ರಿಸಿಬಿಡುತ್ತೇನೆ. ಒಟ್ಟಿನಲ್ಲಿ ಚೆನ್ನಾಗಿದೆ ಎಂದೋ ಒಟ್ಟಿನಲ್ಲಿ ಸಾಧಾರಣ ಎಂದೋ ಅಂದುಬಿಡುತ್ತೇನೆ. ನನ್ನನ್ನು ಜನ ಹೆಚ್ಚು ಓದಿದ ವಿದ್ವಾಂಸ ಅಂತ ತಿಳಿದಿರುವುದು ಈ ಕಾರಣದಿಂದಲೆ. ಅಲ್ಲೊಂದು ಪದ್ಯ, ಇಲ್ಲೊಂದು ಭಾಷಣ, ಬೇರೊಂದು ಕಡೆ ಪತ್ರಿಕೆಯ ಸಮಾಚಾರ ಇಂಥವನ್ನೇ ನಾನು ಸಂಗ್ರಹಿಸಿರುವುದರಿಂದ ನಾನು ಬಹಳ ಮೇಧಾವಿಯಾಗಿದ್ದೇನೆ. ಒಂದು ಪುಸ್ತಕ ಅಥವಾ ಒಬ್ಬ ಕವಿಯ ಮೇಲೆ ಇತರರು ಕೊಟ್ಟ ಅಭಿಪ್ರಾಯವನ್ನೇ ನನ್ನದೆಂದು ಹೇಳಿಬಿಡುವುದು ನನ್ನ ವಾಡಿಕೆ. ನಾವೆಲ್ಲ ಕವಿಗಳಂತೆ ಒಂದು ರೀತಿಯಲ್ಲಿ ಕಳ್ಳರೆ. ಎಲ್ಲ ಸಾಲಾಗಿ ನಿಂತಿದ್ದೇವೆ. ಒಬ್ಬರ ಕೈ ಇನ್ನೊಬ್ಬರ ಜೋಬಿನಲ್ಲಿದೆ.

ಇತ್ತೀಚೆಗೆ ನನ್ನ ಪುಸ್ತಕ ಭಂಡಾರ ಹೇರಳವಾಗಿ ಬೆಳೆಯುತ್ತಿದೆ. ಬರೆದವರೆಲ್ಲ ನನಗೆ ಒಂದೊಂದು ಕಾಪಿಯನ್ನು ಕಳುಹಿಸುತ್ತಿದ್ದಾರೆ. ಪ್ರಕಾಶಕರು ಪತ್ರಿಕೆಯ ಸಂಪಾದಕರುಗಳು ವಿಮರ್ಶೆಗಾಗಿ ಕೆಲವನ್ನು ಕಳುಹಿಸುತ್ತಾರೆ. ನಾನೇ ಕೆಲವರಿಂದ ಎರವಲು ತರುತ್ತೇನೆ. ಹೀಗಾಗಿ ಕಾಸಿನ ಖರ್ಚಿಲ್ಲದೆ ನನ್ನ ಭಂಡಾರ ಬೆಳೆಯುತ್ತಿದೆ. ಇನ್ನು ನನ್ನಲ್ಲಿರುವ ಈ ಮೂವತ್ತುಮೂರು ಕೋಟಿಗಳನ್ನು ಇಟ್ಟುಕೊಂಡು ಏನು ಮಾಡಬೇಕೋ ತಿಳಿಯದಾಗಿದೆ. ಮಾರಿದರೆ ಮಾರಿಕೊಂಡ ಎಂದು ಮೂದಲಿಸುತ್ತಾರೆ. ಓದುವವರಿಗೆ ಕೊಟ್ಟರೆ ಪುಸ್ತಕಗಳು ಹಿಂತಿರುಗುವುದಿಲ್ಲ. ಅವು ಅಭಿಮನ್ಯುವಿನ ಅಣ್ಣ ತಮ್ಮಂದಿರೆಂದು ತೋರುತ್ತದೆ. ಕೈ ಬಿಟ್ಟು ಹೋಗುತ್ತವೆಯೇ ಹೊರತು ಹಿಂತಿರುಗಿ ಬರುವುದಿಲ್ಲ. ಇನ್ನು ಮನೆಯಲ್ಲಿ ಅವುಗಳನ್ನು ಇನ್ನು ಮೇಲೆ ಇಟ್ಟುಕೊಳ್ಳುವಂತಿಲ್ಲ. ಇದ್ದ ಬೀರುಗಳೆಲ್ಲ ತುಂಬಿವೆ. ಕಿಟಕಿ, ಮಾಡ, ಗೂಡು, ಗೋಪುರ ಎಲ್ಲದರ ಮೇಲೂ

ರಾಶಿ ರಾಶಿ ಬಿದ್ದಿವೆ. ನಾಲ್ಕೂ ಕಡೆ ಕಟ್ಟೆ ಕಟ್ಟಿರುವ ಕೆರೆಗೆ ಹೊಳೆಯ ನೀರು ನುಗ್ಗಿದಂತೆ ಪುಸ್ತಕಗಳು ಮತ್ತೆ ಮತ್ತೆ ಒಂದು ನನ್ನ ಮನೆ ತುಂಬು ತ್ತಿದ್ದರೆ ನನ್ನ ಗತಿ ಏನು? ಹೊತ್ತು ಹೋಗುವುದೆನಗೆ ಪುಸ್ತಕದ ಸಂಗದಲಿ ಎಂದು ಓದಿ ಓದಿ ಮರುಳಾಗಲು ನನಗೆ ಆಶೆ ಇಲ್ಲ. ಅಷ್ಟು ಜನ ಮೇಧಾವಿಗಳ ಬುದ್ಧಿಯ ಭಾರವೆಲ್ಲ ಪುಸ್ತಕಗಳಲ್ಲಿ ಎರಕವಾಗಿರುವಾಗ ನಾಡಿನ ತಲೆಯ ಭಾರವನ್ನು ನನ್ನ ಮನೆ ಎಷ್ಟು ಅಂತ ಹೊತ್ತೀತು! ಪುಸ್ತಕದ ಬದನೇಕಾಯಿನಿಂದ ಬಜ್ಜಿ ಮಾಡಲಾಗುವುದಿಲ್ಲ. ಪುಸ್ತಕ ಹಸ್ತಕ್ಕೆ ಭೂಷಣವೇ ಹೊರತು ಗೃಹಕ್ಕಲ್ಲ. ಹಿಂದಿನ ಕಾಲದವರು ಮನೆ ಯಲ್ಲಿ ವರ್ಷಕ್ಕೆ ಆಗುವ ಸಾಮಾನುಗಳನ್ನೆಲ್ಲ ಶೇಖರಿಸಿಕೊಂಡು ಮನೆ ಯನ್ನು ದಿನಸಿ ಅಂಗಡಿಯಂತೆ ಇಟ್ಟುಕೊಳ್ಳುತ್ತಿದ್ದರು. ಈಗ ಮನೆಯಲ್ಲಿ ದಿನಸಿಗೆ ಅಭಾವವಾಗಿರುವಾಗ ನಾವು ಅವುಗಳನ್ನು ಪುಸ್ತಕ ಭಂಡಾರ ಗಳಾಗಿ ಮಾಡಿಕೊಂಡಿದ್ದೇವೆ.

ಭಂಡಾರ ಎನ್ನುವಾಗ ನನಗೆ ಅನಿಸುತ್ತದೆ ನನ್ನ ಪುಸ್ತಕಗಳನ್ನೆಲ್ಲ ಯಾವುದಾದರೂ ಭಂಡಾರಕ್ಕೆ ಉಚಿತವಾಗಿ ಕೊಟ್ಟುಬಿಡಬಾರದೇಕೆ ಎಂದು. ನಾನು ದಿವಂಗತನಾದ ಮೇಲೂ ನನ್ನ ಭಂಡಾರ ಭಂಡಾರ ವನ್ನೇ ಸೇರುತ್ತದೆ. ಕೆರೆಯ ನೀರು ಕೆರೆಗೆ ಸೇರುವಂತೆ. ಅದನು ನಾನಿರುವಾಗಲೇ ಮಾಡಿ ನನ್ನ ಹೆಸರನ್ನು ಪತ್ರಿಕೆಯಲ್ಲಿ ಕಾಣುವುದು ಹೆಚ್ಚಿನದಲ್ಲವೆ?

ಆದರೆ ಇದರಲ್ಲಿ ಒಂದು ತೊಂದರೆ ಇದೆ. ನಾನು ಎರವಲು ತಂದು ಹಿಂದಕ್ಕೆ ಕೊಡದ ಪುಸ್ತಕಗಳು, ನಾನು ಮರೆತು ಎತ್ತಿಕೊಂಡುಬಂದ ಪರರ ಸ್ವತ್ತುಗಳು, ನಾನು ಓದದೇ ರಾಶಿ ಹಾಕಿದ ಗ್ರಂಥಗಳು ಇವೆಲ್ಲ ಸಾರ್ವಜನಿಕರ ಕೈಗೆ ಸೇರಿದರೆ ನನ್ನ ಗತಿ ಏನು? ನನ್ನ ಗುಟ್ಟು ರಟ್ಟೆ ನಲ್ಲೇ ಇರಬೇಕಾದುದು ಅವಶ್ಯಕ. ಖಾಲಿ ಡಬ್ಬದ ಮೇಲೆ ಕಲ್ಲು ಎಸೆ ದಂತೆ ನನ್ನ ಬರೀ ತಲೆ ಶಬ್ದಮಾಡುವುದು ತರವಲ್ಲ. ಆದ್ದರಿಂದ ನನ್ನ ಬಾಲಕ್ಕೆ ಕಟ್ಟಿದ ಕೋಲನ್ನು ಬಿಚ್ಚಲು ನನಗೆ ಇಷ್ಟವಿಲ್ಲ.

ಇದಕ್ಕೆ ಇರುವುದು ಒಂದೇ ದಾರಿ. ಸೌದೆಗೆ ಅಭಾವವಾಗಿರುವ ಈ ಕಾಲದಲ್ಲಿ ಪುಸ್ತಕಗಳಿಂದ ಯತ್ ಕಿಂಚಿತ್ ಉಪಕಾರವಾಗಲಾರದೆ?

ಒಂದೂವರೆ ಕೊಟ್ಟು (ನಾನು ಕೊಡದೆ!) ತಂದ ಪುಸ್ತಕದಿಂದ ಒಂದರ್ಧ ಕಾಫಿಯಾಗಲಾರದೆ? ಹತ್ತು ಪುಸ್ತಕಗಳಿಂದ ಹಂಡೆ ನೀರು ಕಾಯು ವುದಿಲ್ಲವೆ? ಅರವತ್ತರಿಂದ ಅಡಿಗೆಯಾಗದೆ? ಆದೀತು. ಇದರಿಂದ ಯಾವ ತೊಂದರೆಯೂ ಯಾರಿಗೂ ಇರಲಾರದು. ಬೆಂಕಿ ಬರಿಯ ಹಾಳೆಗಳನ್ನು ಸುಟ್ಟೀತು. ಬುದ್ಧಿಯನ್ನು ಸುಡಲಾರದು.

ಸುಟ್ಟು ಹಾಕುವುದಕ್ಕೆ ಮೊದಲು ನನಗೆ ಅತಿ ಪ್ರಿಯವಾದ ಕೆಲವು ಪುಸ್ತಕಗಳನ್ನು ಉಳಿಸಿಕೊಳ್ಳುವ ಆಶೆಯಾಗುತ್ತದೆ. ಎಲ್ಲ ಪುಸ್ತಕಗಳನ್ನೂ ಉಳಿಸಿಕೊಳ್ಳುವ ಆಶೆಯಾದರೆ ಕಷ್ಟ. ಸಾಮ್ಯುಯಲ್ ಗೋಲ್ಡ್ವಿನ್ ನ ಆಫೀಸಿನಲ್ಲಿ ಟೈಪಿಸ್ಟ್ ಆಗಿದ್ದ ಮಹಿಳೆ ತನ್ನ ಆಫೀಸಿನಲ್ಲಿ ರಾಶಿ ರಾಶಿ ಯಾಗಿದ್ದ ಹಳೆಯ ..ಕಾಗದ ಪತ್ರಗಳನ್ನು ನೋಡಿ ಅಸಹ್ಯಪಟ್ಟು ಅವುಗಳನ್ನು ಸುಡಬಾರದೇಕೆ ಎಂದು ಯಜಮಾನರನ್ನು ಕೇಳಿದಳಂತೆ. ಅದಕ್ಕೆ ಗೋಲ್ಡ್ವಿನ್ ನಗುತ್ತ "ಆಗಬಹುದು. ಎಲ್ಲವನ್ನೂ ಸುಟ್ಟು ಬಿಡಬಹುದು. ಆದರೆ ಸುಡುವುದಕ್ಕೆ ಮುಂಚೆ ಕಾಗದಗಳ ಒಂದೊಂದು ನಕಲು ಮಾಡಿಟ್ಟುಕೊ. ಮರೆಯಬೇಡ!" ಎಂದನಂತೆ – ಹಾಗೆ ನಾನು ನನ್ನ ಪ್ರಿಯರಾದ ಕವಿಗಳನ್ನು ಉಳಿಸಿಕೊಳ್ಳ ಹೊರಟರೆ ಅಧ್ವಾನವಾಗ ಬಹುದು. ಇಲ್ಲ ಹಾಗೆ ಇಲ್ಲ ಹೀಗೆ, ಯಾವುದಾದರೊಂದು ನಿರ್ಧಾರಕ್ಕೆ ಬರದೆ ಗತ್ಯಂತರವಿಲ್ಲ.

ಏಕೆಂದರೆ ಈ ಹಳೆಯ ರಾಶಿ ಕರಗಿದರೆ ಮತ್ತೆ ಹೊಸ ರಾಶಿ ಬರಲು ಅನುಕೂಲವಾದೀತು!



# ಸ್ವತಂತ್ರ

ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಡುವ ಮಸೂದೆ ಪಾರ್ಲಿಮೆಂಟಿನ ಅಂಗೀಕಾರವನ್ನು ಪಡೆದು ಕಾಯಿದೆಯಾದ ದಿನವನ್ನು ನಾನು ಎಂದಿಗೂ ಮರೆಯಲಾರೆ. ಅವತ್ತಾದ ಅಲ್ಲೋಲ – ಕಲ್ಲೋಲವನ್ನು ವರ್ಣಿಸುವುದು ಕಷ್ಟ. ಇಂಡಿಯನ್ ಎಕ್ಸ್‌ಪ್ರೆಸ್ ರೈಲಿನ ಒಳಗೆ ಬರುತ್ತಿದ್ದುದು ಏರ ಮೇಲೆ ಬರಲಾರಂಭವಾದುದು ನನ್ನ ತೊಂದರೆಯನ್ನು ತೀವ್ರಗೊಳಿಸಿತು. ಭಾಗ ಆಗೋಕೆ ಬಡಿವಾಡಿದ್ದಾಯಿತು. ಬಿಟ್ಟು ಹೋಗಿ ಅಂದಾಗಲೂ ಒಂದು ಪಾಯಿಂಟನ್ನು ಇಟ್ಟು ಹೋದರು, ನಮ್ಮನ್ನಾಳುವವರು. ಇದ್ದರೂ ಕಷ್ಟ ಹೋದರೂ ಕಷ್ಟ ಎನ್ನುವ ಗಾದೆಯಂತೆ ಮಾಡಿದರು.

ಇದನ್ನೆಲ್ಲ ಯೋಚಿಸುತ್ತಾ ನಾನು ಜೋಲು ಮುಖಾನ ಇನ್ನಷ್ಟು ಜೋಲು ಹಾಕಿಕೊಂಡು ಕುಳಿತಿದ್ದರೆ ನಮ್ಮ ಕಿಟ್ಟು ಹೋ ಅಂತ ಅರ್ಭಟ ಮಾಡ್ತಾ ಎಕ್ಸ್‌ಪ್ರೆಸ್ ಕೈಲಿ ಹಿಡಿದು ಓಡಿಬಂದು ಅಪ್ಪಾ ಬಂತು ಸ್ವರಾಜ್ಯ. ಸ್ವಾತಂತ್ರ್ಯ ಎಂದು ನನ್ನ ಬೆನ್ನ ಮೇಲೆ ಧುಡುಂ ಅಂತ ಒಂದು ಗುದ್ದು ಕೊಟ್ಟ. ನಿಜವಾಗಿಯೂ ಸ್ವರಾಜ್ಯ ಬಂತು ಅಂತ ಕಾಣುತ್ತೆ. ಅವತ್ತೆಲ್ಲ ನಮ್ಮ ಸೂರಿಯ ಕಾಟ ತಡೆಯಲಾಗಲಿಲ್ಲ. ಸೂರು ಸೇರದೇ ಅಲೆದಾಡಿದ. ಊಟಕ್ಕೆ ಏಳು ಅಂದರೆ ಕಾಫಿ ಕೊಡಿಸು ಅಂದ. ಕೇಳದೆ ಹೇಳದೆ ಸೈಕಲ್ ತೆಗೆದುಕೊಂಡು ಹೊರಟ. ಬಲಗಡೆ ಓಡಿಸಿದ. ಪೋಲೀಸಿನವನನ್ನ ಹೆದರಿಸಿದ. ಇನ್ನ ನಿನ್ನ ಆಟ ನಡೆಯೊಲ್ಲ ಮಂ. ಇನ್ನ ನಮಗೆ ಸ್ವತಂತ್ರ ಬಂತು ಅಂದ. ಓದು ಅಂದರೆ ಓದಿ ಏನು ಪ್ರಯೋಜನ ಎಂದ. ಏನೋ ಸೂರಿ ಇದು ಎಂದು ಅಮ್ಮ ಕೇಳಿದರೆ ಏನಮ್ಮಾ ಹೀಗಂತೀಯ. ನಮಗೆಲ್ಲ ಸ್ವರಾಜ್ಯ ಬಂದಿದೆ. ಖುಷಿ ಮಾಡಮ್ಮ ನಿನಗೆ ಗೊತ್ತಿಲ್ಲ.

'ಇವತ್ತು ಊರಿನಲ್ಲೆಲ್ಲ ಸ್ವತಂತ್ರದ ಮೆರವಣಿಗೆ ಆಗುತ್ತೆ ಎಂದು ಅವಳನ್ನು ಉತ್ಸಾಹಿಸಿದ.

ಅವಳು ನನ್ನ ಹತ್ರ ಬಂದು ಬೆನ್ನ ಮೇಲೆ ಒಂದು ಗುದ್ದಿಟ್ಟು ಏನ್ರಿ ದಿನ ದಿನವೂ ಕೇಳಿದ್ದೆಲ್ಲ ಇಲ್ಲ ಅಂತಿದ್ರಲ್ಲ. ಅಕ್ಕಿ ಇಲ್ಲ. ಬೇಳೆ ಬಂದಿಲ್ಲ. ಮಾವಿನ ಹಣ್ಣು ಹುಳಿ ಎಂದು ದಿನಾ ಸೋಗು ಹಾಕುತ್ತಿದ್ದಿರಲ್ಲ. ಇವತ್ತು ಏನು ಹೇಳತೀರಿ? ಅಲ್ಲ ಊರಲ್ಲೆಲ್ಲ ಸ್ವತಂತ್ರ ಸೂರೆ ಹೋಗ್ತಾ ಇದೆಯಂತೆ. ನಮ್ಮನೇಗೆ ಒಂದು ನೂರು ತನ್ನಿ ಎಂದು ಮುದ್ದು ಮಾಡಿದಳು.

ಅಂತೂ ದೇಶಾನ ಎರಡಾಗಿ ಒಡೆದು ಬಿಟ್ಟರು. ಅದು ಆಗಲೇ ಬೇಕಾಗಿತ್ತೆ? ಅದಕ್ಕೆ ಯಾರು ಯಾರು ಕಾರಣರಾದರೊ? ಅಂತು ಭಾರತ ಎರಡಾಗಿ ಒಡೆದು ಹೋಯಿತು.

ಆ ಭಾವನೆ ಮನಸ್ಸಿಗೆ ಬಂದು ಮೂಡುವಷ್ಟರಲ್ಲಿಯೆ ರಾಮು ಬಂದ. ಏನಯ್ಯ ಭೂಪ, ಹೊಡೆದು ಬಿಟ್ಟೆ ಎನ್ನುತ್ತಲೇ ಒಂದ. "ಹೊಡೆದು ಬಿಟ್ಟೆ. ಏನಂತೆ ಏನು. ಗೊತ್ತಿಲ್ಲವೇನೋ ಪಾಪ. ಸ್ವರಾಜ್ಯ ಹೊಡೆದೆ ಯಲ್ಲಯ್ಯ. ವೀರಾಗ್ರೇಸರ. ಬಾ ಕಾಫಿ ಕೊಡಿಸು ಬಾ" ಎಂದವನು ನನ್ನ ಕೈಲಿ ಕೈ ಇಟ್ಟು ಎಳೆದ. ನನ್ನ ಅಂಗಿ ಅಲುಗಾಡಿಸಿ ನೋಡಿದ. ನಾಲ್ಕಾಣೆ ಇರುವುದನ್ನು ಕಂಡ. ಕಾಫಿ ಗಿಟ್ಟಿಸಿಯೇ ಬಿಟ್ಟ.

ನಾನು ಹೇಳಿದೆ "ಅಲ್ಲಯ್ಯ ಅಜ್ಜಿ ಹೇಳ್ತಾ ಇದ್ರಲ್ಲ ಹಾಗೆ ರಾಯನಿಗೆ ರಾಜ್ಯ ಬಂದರೆ ರಾಗಿ ಬೀಸುವುದು ತಪ್ಪುತ್ತದೆಯೆ?"

ಅದಕ್ಕೆ ಅವನು ಮೂದಲಿಕೆಯ ಮಾತನ್ನ ನನ್ನ ಮೇಲೆ ಮಡಿಗಿಯೇ ಬಿಟ್ಟ. ಅಯ್ಯೋ ಪಾಪ. ನೀನೇನು ಸ್ವಾತಂತ್ರ್ಯವನ್ನು ಗಳಿಸಲು ಸಹಾಯ ಮಾಡಿಲ್ಲವೇನಯ್ಯ! ನೋಡು ಇಷ್ಟು ದಿನವೂ ದೇಶಕ್ಕಾಗಿ ದುಡಿದು ಸತ್ತವರು ಸತ್ತೇ ಹೋದರು. ಇವತ್ತು ನಿನ್ನಂಥವರು ಸ್ವಾತಂತ್ರ್ಯದ ಸುಖವನ್ನು ಉಣ್ಣುವ ಕಾಲ ಬಂದಿದೆ. ನೀವು ಮಹಾ ಮಾಡಿದ್ದೇನಯ್ಯ. ಸತ್ಯಾಗ್ರಹ ಮಾಡಿದಾಗ ನೀವು ಬಂದಿರೇನಯ್ಯ? ಕರಣಿಕ ಮಹಾಶಯ! ಉತ್ತರ ಕೊಡು. ಪಾಪ ಸರ್ಕಾರದ ಉಪ್ಪು ಉಂಡು ತೆರಿಗೆ ಕೊಟ್ಟ ಸೇವಕರು ಅಂದರೆ ನೀವೆ ಅಲ್ಲವೆ? ಹಗಲು

ರಾತ್ರಿ ಆಫೀಸಿಗೆ ನಡೆದಿದ್ದೀಯು, ದುಡಿದಿದ್ದೀಯೆ. ಒಂದು ದಿನ ಗಾಂಧೀಕೀ ಜೈ ಅಂತ ಕೂಗಿದೆಯಾ? ಕಾಂಗ್ರೆಸ್ ಮೀಟಿಂಗಿಗೆ ಬಂದೆಯಾ? ಗಟ್ಟಿಯಾಗಿ ಸ್ವರಾಜ್ಯದ ಮಾತನಾಡಿದೀಯೇನಯ್ಯ? ಇವತ್ತು ನೋಡು ನಿಮ್ಮಂಥವರಿಗೂ ಸ್ವರಾಜ್ಯದ ಭೋಗ ಸಿಗುತ್ತಿದೆ. ಎಂದವನು ಮಾತಿನ ಮಳೆಗರೆದ. ಕರೆದದ್ದಲ್ಲದೆ ಕಾಫಿ ಬೇರೆ ಗಿಟ್ಟಿಸಿ "ಥ್ಯಾಂಕ್ಯು. ಹೀಗೆ ಅಂದೇ ಅಂತ ಮನಸ್ಸಿಗೆ ಏನೂ ತಿಳಿದುಕೊಳ ಬೇಡಯ್ಯ" ಎಂದು ಬೇರೆ ಹೇಳುತ್ತ ಗಾಡಿ ಬಿಟ್ಟ.

ನನಗೆ ಏಕೋ ಭ್ರಮೆಯಾಗ ಹತ್ತಿತು. ನಾನು ಮತ್ತು ನನ್ನಂಥಾ ಕ್ಲಾರ್ಕುಗಳು ಇಂದು ಸ್ವಾತಂತ್ರ್ಯಕ್ಕೆ ಭಾಗಿಗಳಲ್ಲವೇ ಎಂದು. ವಿದ್ಯಾರ್ಥಿಗಳು ರಾಜಕೀಯಕ್ಕೆ ಇಳಿಯು ಬಾರದು ಎಂದು ಹಿರಿಯರೆಲ್ಲಾ ಹೇಳಿದರು. ಕೇವಲ ರಾಜಕೀಯವನ್ನು ಓದಿ ತಿಳಿದುಕೊಳ್ಳುವುದು ಮಾತ್ರ ಅವರ ಕೆಲಸ ಎಂದು ಹೇಳಿದರು. ಅವರನ್ನ ಉಳಿದು ಇತರರೆಲ್ಲ ದೇಶಕ್ಕಾಗಿ ತ್ಯಾಗ ಮಾಡಬೇಕಾಗಿತ್ತು.

ಆದರೆ ಎಲ್ಲರಿಗೂ ಒಂದೇ ರೀತಿಯ ತ್ಯಾಗ ಸಾದ್ಯವೆ? ಭಾರತದಲ್ಲಿ ಇದ್ದ ನಲವತ್ತುಕೋಟಿ ಜನರೂ ಒಂದೇ ಸಾರಿ 'ಹೋಗಿ' ಎಂದು ಕೂಗಿದ್ದರೆ ನಮ್ಮ ಸ್ವಾತಂತ್ರ್ಯ ಐವತ್ತು ವರ್ಷಗಳ ಹಿಂದೆಯೇ ಸಿಕ್ಕು ಹೋಗುತ್ತಿತ್ತು. ಆದರೆ ಜನ ಏಕೆ ಅದನ್ನು ಮಾಡಲಿಲ್ಲ? ಅದು ಅಸಾಧ್ಯ. ಆದರಂತೆ ತ್ಯಾಗ ಮಾಡುವಾಗಲೂ ಒಂದೇ ರೀತಿಯ ತ್ಯಾಗ ಕ್ರಮ ಎಲ್ಲರಿಗೂ ಸರಿಯಾಗಲಾರದು. ಅಪ್ಪನ ಆಸ್ತಿ ಇದ್ದರೆ ಸರ್ಕಾರಿ ಕೆಲಸ ಬಿಟ್ಟು ದೇಶ ಸೇವೆ ಮಾಡಬಹುದಾಗಿತ್ತು, ಏಕಾಕಿಯಾಗಿದ್ದರೆ ಅದರ ಮಾತೇ ಬೇರೆ ಇತ್ತು. ಆದರೆ ಸಂಸಾರಿಯಾದವನ ಪಾಡೇನು? ಕೂಗಿದಷ್ಟು ಕೆಲಸ ನಡೆಯಲಿಲ್ಲ. ಇದು ಎಲ್ಲರಿಗೂ ಗೊತ್ತಿದೆ. ಅವನವನು ಅವನವನ ಯೋಗ್ಯತೆಯನ್ನರಿತು ತ್ಯಾಗಮಾಡಬೇಕು. ಸರ್ಕಾರದಲ್ಲೇ ಇದ್ದು ಕೆಲಸಮಾಡಿ ಸಾರ್ವಜನಿಕರ ಹಿತದೃಷ್ಟಿಯಿಂದ ದುಡಿದಲ್ಲಿ ಅದು ದೇಶಸೇವೆಯಾಗಲಿಲ್ಲವೆ? ಲಂಚ ರುಷುವತ್ತುಗಳಿಗೆ ಸಂಚಕಾರ ವಿಡುವುದು ತ್ಯಾಗವಲ್ಲವೆ? ದೇಶದ ಅರ್ಧ ಜನ ಸತ್ಯಾಗ್ರಹದಲ್ಲಿದ್ದಾಗ ಕೆಲವರಾದರೂ ಸರ್ಕಾರದ ರಥವನ್ನು ನಡೆಸಬೇಡವೆ? ಖಾದಿ ಹಾಕ

ಲಿಕ್ಕಾಗದವನು ಖಾದಿ ಟೋಪಿ ಹಾಕಿದ್ದಾನೆ. ಹತ್ತು ರೂಪಾಯಿ ಕೊಡದವನು ಎರಡಾಣೆ ಕೊಟ್ಟಿದ್ದಾನೆ. ಅದೇನು ತ್ಯಾಗವಲ್ಲವೆ?

ನಿಜ. ಸರ್ಕಾರಿ ನೌಕರ ಕೃತ್ಪೂರ್ವಕವಾಗಿ ಸಾರ್ವಜನಿಕ ಸಭೆಗಳಿಗೆ ಬರಲಿಲ್ಲ. ಗಾಂಧೀಕಿ ಜೈ ಎನ್ನಲಿಲ್ಲ. ಆದರೆ ಮನೆಯಲ್ಲಿ ಕುಳಿತಿದ್ದರೂ ಅವನ ಹೃದಯ ಅಶ್ವತ್ಥಾಮನ ಆತ್ಮದಂತೆ ಕಾಂಗ್ರೆಸ್ ಮೀಟಿಂಗ್‌ಗಳ ಕಡೆ ಹರಿಯುತ್ತಿತ್ತು. ಬಾಯಿ ಕೂಗದಿದ್ದರೂ ಹೃದಯ ಜೈ ಎಂದಿತ್ತು. ಈ ಮೂಕ ಶೋಕವನ್ನು ಕಂಡು ಸಹಾನುಭೂತಿಯನ್ನು ತೋರಿಸುವವರೆಷ್ಟು ಮಂದಿ? ಇವೆಲ್ಲ ನನ್ನ ಅಂತರಾಳದಿಂದ ಕುದಿದು ಎದ್ದಾಗ ಮತ್ತೊಮ್ಮೆ ಕಾಫಿ ಕುಡಿಯುವ ಮನಸ್ಸಾಯಿತು. ಸಾಲ ಹೇಳಿ ಕಾಫಿ ಕುಡಿದು ಬಂದೆ.

ನನಗೆ ಮನೆ ಬಾಡಿಗ್ಗೆ ಕೊಟ್ಟವರು ಬಂದು ಕೇಳಿದರು. ಸ್ವಾತಂತ್ರ್ಯ ಬಂತಂತಲ್ಲ ಇದಕ್ಕಾಗಿ ಸರ್ಕಾರಿ ನೌಕರಿ ನನಗೆ ಇನ್ನ ಇಲ್ಲ ತಾನೆ ಎಂದವರ ಪ್ರಶ್ನೆ. ಸ್ವಾತಂತ್ರ್ಯ ಬಂದರೆ ಸರ್ಕಾರ ಮುಳುಗಿ ಹೋಗಬೇಕೆಂದು ಅವರ ವಾದ.

ತಿಳಿದವರು ನಮ್ಮ ಮೇಷ್ಟ್ರು ಹೇಳುತ್ತಾರೆ. ಸರಿ ಇನ್ನ ನಾವಿರೋ ಸ್ಥಿತೀಗೆ ಸ್ವರಾಜ್ಯ ಬೇರೆ ದಂಡ. ಇವಿಲ್ದಾಗ ಸದ್ಯ ರೂಪಾಯಿಗೆ ಮೂರು ಸೇರು ಅಕ್ಕಿಯಾದರೂ ಸಿಕ್ಕುತ್ತಿತ್ತು. ಈಗ ಅದೂ ಇಲ್ಲ ಅಂತಿದಾರೆ. ಇದೇನೋ ಸ್ವರಾಜ್ಯ ಎಂದು.

ಒಟ್ಟಿನಲ್ಲಿ ಸ್ಥಿತಿ ಇಲ್ಲಿಗೆ ಬಂದು ನಿಂತಿದೆ. ಹುಡುಗರು ಸ್ವತಂತ್ರರಾಗಲು ಯತ್ನಿಸುತ್ತಿದ್ದಾರೆ. ಅಪ್ಪನ ಜೇಬಿನ ದುಡ್ಡೆಲ್ಲ ಮಸಾಲೆ ದೋಸೆಗಳಾಗುತ್ತಿವೆ. ಸ್ಕೂಲಿನಲ್ಲಿ ಉಪಾಧ್ಯಾಯರು ನೊಣ ಹೊಡೆಯುತ್ತಿದ್ದಾರೆ. ಪಾಕಿಸ್ಥಾನವಾಯಿತು. ಬಾಕಿ ಉಳಿದಿರುವುದು ಮಹಿಳಾಸ್ಥಾನ. ಅದೂ ಒಂದು ಆಗಬೇಕಾದದ್ದೆ. ಅದು ಪಾಕಿಸ್ಥಾನಕ್ಕಿಂತ ಮುಖ್ಯ. ಏಕೆಂದರೆ ಹಿಂದು ಮುಸ್ಲಿಮ್ ಎನ್ನುವುದು ಮನುಷ್ಯ ಕಲ್ಪಿತ. ಆದರೆ ಮಹನೀಯರು ಮತ್ತು ಮಹಿಳೆಯರು ಎಂಬ ಭೇದ ದೈವನಿರ್ಮಿತ. ಆದ್ದರಿಂದ ಭಾರತವನ್ನು ಎರಡು ಭಾಗ ಮಾಡಿ ಭಾರತ, ಭಾರತಿ ಎಂದು ಹೆಸರಿಟ್ಟು ಮಹನೀಯರೂ ಮಹಿಳೆಯರೂ ಬೇರೆಯಾಗುವುದು ಒಳ್ಳೆಯದು.

ಇಲ್ಲದಿದ್ದಲ್ಲಿ ಭಾರತ ಕುರುಕ್ಷೇತ್ರವಾಗುತ್ತದೆ. ಭಾರತ ಯುದ್ಧ ಪ್ರಾರಂಭವಾಗುತ್ತದೆ. ಯುದ್ಧವಾಗಿ ಮಹಿಳಾ ಬಲದ ಮುಂದೆ ಸೋತು ಹೋಗುವುದಕ್ಕಿಂತ ಸ್ಥಾನ ಭೇದವನ್ನು ಏರ್ಪಡಿಸುವುದೇ ಮೇಲಲ್ಲವೆ? ಇನ್ನು ವ್ಯವಹಾರ ಪ್ರಪಂಚದ ಅವಸ್ಥೆ ವರ್ಣಿಸಲಸದಳವಾಗಿದೆ. ನಮಗೇನ್ರಿ. ನಮ್ಮದೇನ್ರಿ ಸರಕಾರ. ಯಾರು ಇದ್ದರೆಷ್ಟು ಯಾರು ಹೋದರೆಷ್ಟು. ಎಂದು ಮೊದಲು ಜನ ಉಡಾಫೆ ಮಾಡುತ್ತಿದ್ದರು. ನಮ್ಮದಲ್ಲ ಎನ್ನುತ್ತಿದ್ದವರು ಇಂದು "ಇನ್ನು ಸರ್ಕಾರ ನಮ್ಮದೇ. ನಾವು ಬೇಕಾದರೆ ಕೆಲಸ ಮಾಡುತ್ತೇವೆ. ಇಲ್ಲದಿದ್ದರೆ ಇಲ್ಲ" ಎನುತ್ತಾರೆ, ಉಡಾಫೆ ಮಾಡುತ್ತಾರೆ.

ಸ್ವರಾಜ್ಯ ಬರುತ್ತೆ ಬರುತ್ತೆ ಅಂತಾ ಇದ್ರು. ಇಂದು ಬಂದದ್ದೂ ಆಯಿತು. ಇನ್ನ ನನಗೆ ದಿನಾ ಬೆನ್ನ ಮೇಲೆ ಹತ್ತು ಗುದ್ದು, ಎಂಟಾಣೆಗೆ ಕ್ಷೌರ, ಇತ್ಯಾದಿಗಳು ಆಗುತ್ತಾ ಬಂದರೆ ಸೀದಾ ವೈಸ್ರಾಯರಿಗೆ ಒಂದು ಕಾಗದ ಬರೆದುಬಿಡೋಣ ಅಂತಿದೇನೆ. ನೀವೆ ಇದ್ದುಬಿಡಿ ಎಂದು!!



# ಶೂನ್ಯ

ಶುಚಿ ಮತ್ತು ರುಚಿ ಎಂಬ ವಿಷಯವನ್ನು ಕುರಿತು ಒಂದು ದೀರ್ಘ ವಾದ ಪ್ರಬಂಧವನ್ನು ಬರೆದು ಅದನ್ನು ಮುಕ್ತಾಯಗೊಳಿಸುವಾಗ ಒಬ್ಬ ಲೇಖಕ ಹೀಗೆ ಬರೆದನಂತೆ "ಇನ್ನು ಈ ಊರಿನಲ್ಲಿರುವ ಶುಚಿಯಾದ ಮತ್ತು ರುಚಿಯಾದ ತಿಂಡಿ ತೀರ್ಥಗಳನ್ನು ತಯಾರಿಸುವ ಹೋಟಲು ಗಳೆಂದರೆ ಎರಡೇ. ಯಾವುವೆಂದರೆ...." ಎಂದು. ಅವನು ಯಾವ ಹೋಟಲಿನ ಹೆಸರನ್ನೂ ಹೇಳದೆ ಬಿಟ್ಟಿರುವ ಅರ್ಥವೇನೆಂದರೆ ಅಂಥಾ ಹೋಟಲುಗಳು ಇಲ್ಲವೇ ಇಲ್ಲ ಎಂದು. ಎಂದರೆ ಅವನು ಹೇಳದೇ ಬಿಟ್ಟು, ಹೇಳಬೇಕಾದುದನ್ನೆಲ್ಲ ಹೇಳಿಬಿಟ್ಟಿದ್ದಾನೆ.

ಆ ಲೇಖಕನ ಮಾದರಿಯನ್ನೀಗ ನಾನು ಅನುಸರಿಸಬೇಕೆಂದಿದ್ದೇನೆ. ಶೂನ್ಯ ಎಂದು ಶಿರೋನಾಮೆಯನ್ನು ಮಾತ್ರ ಬರೆದು ಹತ್ತು ಪುಟಗಳನ್ನು ಖಾಲಿ ಬಿಟ್ಟುಬಿಡಬೇಕು ಎಂದಿದ್ದೇನೆ. ಏಕೆಂದರೆ ಶೂನ್ಯವನ್ನು ಕುರಿತು ಏನು ತಾನೆ ಬರೆಯಲಾದೀತು? ಶೂನ್ಯವನ್ನು ಕುರಿತು ಬರೆಯುವುದು ಶುದ್ಧ ತಪ್ಪು. ಶುಷ್ಕವಾದ ವಿಚಾರವದು. ನಾನು, ನನ್ನ ಭಾವನೆಗಳು, ಮೇಜು, ಗಾಜು, ಚಿನ್ನ, ಜನ್ನ ಇಂಥಾ ವಿಚಾರಗಳ ಮೇಲಾದರೆ ಏನ ನ್ನಾದರೂ ಬರೆಯಬಹುದು. ಆದರೆ ಶೂನ್ಯ ವಿಚಾರವನ್ನು ಕುರಿತು ಬರೆಯುವುದಾದರೂ ಏನನ್ನು?

ಸಾಮಾನ್ಯವಾಗಿ ನನಗೆ ಇದುವರೆಗೂ ಈ ಶೂನ್ಯ ಪ್ರಶ್ನೆ ಒದಗಿರಲಿಲ್ಲ. ಈ ಶೂನ್ಯ ಸಮಸ್ಯೆಯು ಅರಿವಾಗಿರಲಿಲ್ಲ. ನನ್ನ ತಲೆಯಲ್ಲಿ ಒಂದು ದಿನವಾದರೂ ಶೂನ್ಯವಿದು ಮೂಡಿಲ್ಲ. ಬೆಳಗ್ಗೆ ಆರರಿಂದ ಎಂಟೂವರೆ ಅಥವಾ ಒಂಬತ್ತು ಗಂಟೆಯವರೆಗೆ ಸಾದೆಗಾಗಿ ಕ್ಯೂ ನಿಲ್ಲುವುದು.

ಅನಂತರ ಹಸೀ ಸೌದೆಯನ್ನು ಬಿಸಿಮಾಡಿ, ಬೆಂಕಿ ಹೊತ್ತಿಸಿ ಸ್ನಾನ ಊಟಗಳನ್ನು ಮಾಡುವ ಜಂಜಾಟ ಅಮರಿಕೊಂಡಾಗ ನನಗೆ ಶೂನ್ಯದ ಅರಿವು ಮೊದಲು ಉಂಟಾಯಿತು. ಬರುವ ಸಂಬಳ ಏತಕ್ಕೂ ಸಾಲದು. ತಾಪತ್ರಯದ ಪರ್ವತದ ಮುಂದೆ ಕಾಸಿನ ಗುದ್ದಲಿ ಅಸಮರ್ಥವಾದಾಗ ನಾನು ಶೂನ್ಯಾವೃತನಾದೆ. ಆಕಾಶವನ್ನು ನೋಡಿದೆ. ಏನೂ ಕಾಣಲಿಲ್ಲ. ಬಯಲನ್ನು ನೋಡಿದೆ. ಬವಳಿ ಬಂತು. ಹೊಸದಾಗಿ ವಿಮಾನದದಲ್ಲಿ ಕುಳಿತು ಹಾರಿದವನ ಕಣ್ಣು ಕತ್ತಲುಗವಿಯುವಂತೆ ನನ್ನ ಕಣ್ಣುಗಳು ಕಾಣದಾದವು. ಜಗತ್ತೇ ಶೂನ್ಯವಾಗಿ ಕಂಡಿತು. ಸಂಸಾರ ಶೂನ್ಯವಾಗಿ ಕಂಡಿತು. ಹೋಟಲೇ ಸ್ವರ್ಗ ಎನಿಸಿತು.

ಹೀಗೆ ಶೂನ್ಯಾವಸ್ಥೆಯ ಶೋಚನೀಯ ಸ್ಥಿತಿಯಲ್ಲಿರುವಾಗ ನಾನು ಶೂನ್ಯ ಚಿಂತನೆ ಮಾಡಿದೆ. ಶೂನ್ಯ ಎಂದರೇನು ಎಂಬ ಪ್ರಶ್ನೆಯನ್ನು ಕೇಳಿಕೊಂಡೆ. ಶೂನ್ಯ ಎಂದರೆ ಸೊನ್ನೆ. ಗುಂಡಾಗಿರುವುದು. ಚೆಂಡಿನಂತಹದು. ಗಾಲಿಯ ಮಾದರಿಯದು. ಅದನ್ನ ಶೂನ್ಯ ಎನ್ನುತ್ತಾರೆ. ಒಂದರ ಮುಂದೆ ಶೂನ್ಯವನ್ನಿಟ್ಟರೆ ಹತ್ತಾಗುತ್ತದೆ. ಆದರೆ ನಮ್ಮ ಉಪಾಧ್ಯಾಯರು ನನಗೆ ನಂಬರು ಕೊಡುವಾಗ ಶೂನ್ಯವನ್ನು ಬರೆದು ಅದರ ಮುಂದೆಯಾಗಲೀ ಹಿಂದೆಯಾಗಲೀ ಒಂದು ಎಂದು ಬರೆಯುವುದನ್ನು ಮರೆತುಬಿಡುತ್ತಿದ್ದರು. ಹೀಗೆ ಎಳತನದಿಂದಲೂ ನಾನು ಹೇರಳವಾಗಿ ಶೂನ್ಯ ಸಂಪಾದನೆ ಮಾಡಿದ್ದೇನೆ. ನಾನು ಸಂಪಾದಿಸಿದ ಶೂನ್ಯಗಳನ್ನೆಲ್ಲ ಒಟ್ಟಿಗೆ ಸಾಲಾಗಿ ಬರೆದು ಅವುಗಳ ಹಿಂದೆ ಒಂದನ್ನು ಬರೆದರೆ ನಾನು ಫಸ್ಟ್‌ಕ್ಲಾಸ್ ಬರಬಹುದಾಗಿತ್ತು. ನನಗೇ ಎಲ್ಲಾ ಬಂಗಾರದ ಪದಕಗಳೂ ಬರುತ್ತಿದ್ದುವು. ಆದರೆ ಒಂದನ್ನು ಯಾರಾದರೂ ಬರೆಯಬೇಕಲ್ಲ. ಒಂದರಿಂದ ಇಷ್ಟು ತೊಂದರೆ. ಒಂದರಿಂದ ಇಷ್ಟು ಭೇದ. ಒಂದರಿಂದ ಇಷ್ಟು ಕಷ್ಟ ನಷ್ಟಗಳು. ಒಂದಿಲ್ಲದೆ ತೀರ್ಗಡೆ ಇಲ್ಲ. ಒಂದೇ ಒಂದು. ಆ ಒಂದು ನಂದಾಗದೇ ನಾನು ಕರಣಿಕನಾದೆ. ಒಂದರಲ್ಲಿ ಎಡವಿ ಬಿದ್ದು ಮದುವೆಯಾದೆ. ಒಂದರಲ್ಲಿ ಗೆಲ್ಲದೆ, ದರಿದ್ರನಾದೆ. ಒಂದನ್ನು ಕಳೆದುಕೊಂಡು ಅಸ್ವತಂತ್ರನಾದೆ.

ಅಂತೂ ಬಾಲ್ಯದಲ್ಲಿ ಯಾವ ಶೂನ್ಯ ಗುಂಡಾಗಿ ದುಂಡಾಗಿ ನಿಂತು